

ಇನ್ನೂ ದಯಬಾರದೆ ದಾಸನ ಮೇಲೆ ಇನ್ನೂ ದಯಬಾರದೆ ॥ ಪ ॥
ಪನ್ನಗಶಯನ ಪಾಲ್ಗಡಲೊಡೆಯನೆ ಕೃಷ್ಣ ॥ ಅ. ಪ ॥

ನಾನಾ ದೇಶಗಳಲ್ಲಿ ನಾನಾ ಕಾಲಗಳಲ್ಲಿ
ನಾನಾ ಯೋನಿಗಳಲ್ಲಿ ಮಡಿದು ಪುಟ್ಟಿ
ನಾನು ನನ್ನದುಯೆಂಬ ನರಕದೊಳಗೆ ಬಿದ್ದು
ನೀನೆ ಗತಿಯೆಂದು ನಂಬಿದ ದಾಸನ ಮೇಲೆ –1–

ಕಾಮಾದಿ ಷಡ್ವರ್ಗ ಗಾಢಾಂಧಕಾರದಿ
ಪಾಮರನಾಗಿಹ ಘಾತಕಿಯು
ಮಾಮನೋಹರನೆ ಚಿತ್ತಜನಕನೆ
ನಾಮವೆ ಗತಿಯೆಂದು ನಂಬಿದ ದಾಸನ ಮೇಲೆ –2–

ಮನಸಾ ವಾಚಾ ಕಾಯದಿ ಮಾಳ್ಪ ಕರ್ಮವು
ದಾನವಾಂತಕ ನಿನ್ನಾಧೀನವಲ್ತೆ
ಏನು ಮಾಡಿದರೇನು ಪ್ರಾಣ ನಿನ್ನದು ಸ್ವಾಮಿ –3–
ಶ್ರೀನಾಥ ಪುರಂದರ ವಿಠಲ ದಾಸನ ಮೇಲೆ

— ಶ್ರೀ ಪುರಂದರದಾಸರು.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಮಂಗಳವಾರ. ಅಷ್ಟದಳಪಾದ ಪದ್ಮಾರಾಧನೆ

ಉದಯ 3–00 ರಿಂದ 3–30 ಸುಪ್ರಭಾತ
(50/- ರೂ ಟಿಕೆಟ್ ಹೊಂದಿದವರಿಗೆ ಮಾತ್ರ ಪ್ರವೇಶ)

,, 3–30 ರಿಂದ 3–45 ವರೆಗೆ ಶುದಿ

,, 3–45 ರಿಂದ 4–30 ವರೆಗೆ ತೋಮಾಲಸೇವೆ (ರೂ 100/- ಟಿಕೆಟ್)

,, 4–30 ರಿಂದ 4–45 ವರೆಗೆ ಓಲಗ ಮತ್ತು ಪಂಚಾಂಗ ಶ್ರವಣ

,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ (ರೂ 100/– ಟಿಕೆಟ್) (ಏಕಾಂತ)

,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ

,, 6–00 ರಿಂದ 11–00 ವರೆಗೆ ಸರ್ವದರ್ಶನ

ಮಧ್ಯಾಹ್ನ 11–00 ರಿಂದ 12–00 ವರೆಗೆ ಶುದ್ಧಿ, ಎರಡನೇ ಅರ್ಚನೆ, (ಏಕಾಂತ)

(ಮಂಗಳವಾರಗಳಲ್ಲಿ ಮಧ್ಯಾಹ್ನ 11–15 ರಿಂದ 11–45 ವರೆಗೆ ಅಷ್ಟದಳಪಾದ ಪದ್ಮಾರಾಧನೆ ನಡೆಯುವುದು.)

,, 12–00 ರಿಂದ 7–00 ವರೆಗೆ ಸರ್ವದರ್ಶನ

ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ, ರಾತ್ರಿ ಕೈಂಕರ್ಯ

,, 8–00 ರಿಂದ 10–00 ವರೆಗೆ ಸರ್ವದರ್ಶನ

,, 10–00 ರಿಂದ 10–30 ವರೆಗೆ ಶುದ್ಧಿ

10–30 ಏಕಾಂತಸೇವೆ (ರೂ 50/– ಟಿಕೆಟ್)

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ಸುಪ್ರಭಾತ (ಏಕಾಂತ)
(ರೂ 50/– ಟಿಕೆಟ್ ಹೊಂದಿದವರಿಗೆ ಮಾತ್ರ ಪ್ರವೇಶ.)

,, 3–30 ರಿಂದ 3–45 ವರೆಗೆ ಶುದ್ಧಿ

,, 3–45 ರಿಂದ 4–30 ವರೆಗೆ ತೋಮಾಲಸೇವೆ (ಟಿಕೆಟ್ ರೂ 100/–)

,, 4–30 ರಿಂದ 4–45 ವರೆಗೆ ಓಲಗ ಮತ್ತು ಪಂಚಾಂಗ ಶ್ರವಣ

,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ (ಟಿಕೆಟ್ ರೂ 100/–)

,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ

,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ

,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ

ಸಂಜೆ 6–00 ರಿಂದ 8–00 ವರೆಗೆ ಶುದಿ ಇತ್ಯಾದಿ

ರಾತ್ರಿ 8–00 ರಿಂದ 10–00 ವರೆಗೆ ಪೂಲಂಗಿ ಸರ್ವದರ್ಶನ

,, 10–00 ರಿಂದ 10–30 ವರೆಗೆ ಶುದ್ಧಿ

10–30 ರಿಂದ ಏಕಾಂತಸೇವೆ (ಟಿಕೆಟ್ ರೂ 50/–)

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (ಏಕಾಂತ)
(50 ರೂ ಟಿಕೆಟ್ ಪಡೆದವರಿಗೆ ಮಾತ್ರ ಪ್ರವೇಶ)

,, 3–30 ರಿಂದ 3–45 ವರೆಗೆ ಶುದಿ

,, 3–45 ರಿಂದ 4–30 ವರೆಗೆ ತೋಮಾಲಸೇವೆ (ಟಿಕೆಟ್ ರೂ 100/–)

,, 4–30 ರಿಂದ 4–45 ವರೆಗೆ ಓಲಗ, ಪಂಚಾಂಗಶ್ರವಣ

,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ (ಟಿಕೆಟ್ ರೂ 100/–)

,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ

,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಅರ್ಜಿತ) ಶುದ್ಧಿ, 2ನೇ ಅರ್ಚನೆ.

,, 8–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ

ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ

,, 8–00 ರಿಂದ 10–00 ವರೆಗೆ ಸರ್ವದರ್ಶನ

,, 10–00 ರಿಂದ 10–30 ವರೆಗೆ ಶುದ್ಧಿ

10–30 ರಿಂದ ಏಕಾಂತಸೇವೆ (ಟಿಕೆಟ್ ರೂ 50/–)

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (ಏಕಾಂತ)
(50/– ರೂ ಟಿಕಟ್ ಹೊಂದಿದವರಿಗೆ ಮಾತ್ರ ಪ್ರವೇಶ.)

,, 3–30 ರಿಂದ 4–30 ವರೆಗೆ ಸಳ್ಳಿಂಪು ಶುದ್ಧಿ, ಮತ್ತು ನಿತ್ಯಕೈಂಕರ್ಯಗಳು

,, 4–30 ರಿಂದ 6–00 ವರೆಗೆ ಅಭಿಷೇಕ (ಅರ್ಜಿತ)

,, 6–00 ರಿಂದ 7–00 ವರೆಗೆ ಸಮರ್ಪಣೆ

,, 7–00 ರಿಂದ 8–00 ವರೆಗೆ ತೋಮಾಲಸೇವೆ ಮತ್ತು ಅರ್ಚನೆ (ಟಿಕೆಟ್ ರೂ 200/–)

,, 8–00 ರಿಂದ 9–00 ವರೆಗೆ ಗಂಟೆ ಬಲಿ, ಶಾತ್ತುಮೊರೆ

,, 9–00 ರಿಂದ ರಾತ್ರಿ 8–30 ವರೆಗೆ ಸರ್ವದರ್ಶನ

(ಸಂಜೆ 7–00 ರಿಂದ 8–30 ವರೆಗೆ ಸಹಸ್ರ ದೀಪಾಲಂಕಾರ ಸೇವೆ)

ರಾತ್ರಿ 8–30 ರಿಂದ 9–30 ವರೆಗೆ ಶುದ್ಧಿ ಇತ್ಯಾದಿ

,, 9–30 ರಿಂದ 10–00 ವರೆಗೆ ಸರ್ವದರ್ಶನ

,, 10–00 ರಿಂದ 10–30 ವರೆಗೆ ಶುದ್ಧಿ

10–30 ಏಕಾಂತಸೇವೆ (ಟಿಕೆಟ್ ರೂ 50/–)

---

ಗಮನಿಕೆ :– ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ಉಯ್ಯಾಲೆಸೇವೆ, ವಾಹನ ಸೇವೆಗಳು, ವಸಂತೋತ್ಸವ ಮಧ್ಯಾಹ್ನ 1–00 ರಿಂದ 5–00 ನಡುವೆ ನಡೆಯುತ್ತವೆ.
ರಾತ್ರಿಯ ಹೊತ್ತು ಸರ್ವದರ್ಶನದ ವೇಳೆ ಭಕ್ತಯಾತ್ರಿಕರ ಸಾಂದ್ರತೆಯ ಅನುಕೂಲಕ್ಕೆ ತಕ್ಕಂತೆ ರಾತ್ರಿ ಹತ್ತು ಗಂಟೆಯ ನಂತರವೂ ಮುಂದು ವರೆಯುವುದು.




ಸಂಪುಟ ೧೮] ಮಾರ್ಚ್ ೧೯೮೮ [ಸಂಚಿಕೆ ೧೦


# ವಿಷಯಸೂಚಿ



ಮುಖಚಿತ್ರ ವನಗಮನದಲ್ಲಿ ಶ್ರೀರಾಮಸೀತಾ ಲಕ್ಷ್ಮಣರು ಚಿತ್ರ ಬಾಬುನಾಥ್.

ಹಿಂಬದಿಯಲ್ಲಿ . ಯುಗಾದಿ ಚಿತ್ರ : ಕೆ. ಜಗದೀಶ್

ಒಳಗಡೆ ಕಪಿಲತೀರ್ಥದಲ್ಲಿ ಬ್ರಹ್ಮೋತ್ಸವ.


ಗೌರವ ಸಂಪಾದಕರು :

ಶ್ರೀ ಸಿ.ಎಚ್. ವೆಂಕಟಪತಿರಾಜು ಐ.ಎ.ಎಸ್.,

ಸಂಪಾದಕ

ಸುಬ್ಬಾರಾವು, ಎಂ.ಎ.,

ಉಪಸಂಪಾದಕ.

ವಿ ಎಸ್. ಶ್ರೀನಿವಾಸನ್ ಎಂ.ಎ ,

ಮುದ್ರಣ :

ಎಂ ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ


ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ —ಸಂ॥

# ಸಂಪಾದಕೀಯ

ಮನುಷ್ಯನಿಗೆ ಹಿಡಿಸಿತು ಎನ್ನುತ್ತೇವೆ-ಎಂದು? ಮನಸ್ಸಿಗೆ ಮುಜ್ಜುಟಿಯಾದಾಗ. ಸಾಧಾರಣವಾಗಿ ತನ್ನ ಸ್ಥಿತಿಗೆ ಸನ್ನಿಹಿತವಾಗಿದ್ದು ತನ್ನ ಸ್ಥಿತಿಯಲ್ಲಿಯೇ ಇದ್ದೂ ತನಗಿಂತ ಉತ್ತಮತೆಯನ್ನು ಪಡೆದಾಗ, ಇಲ್ಲಿ ಈ ನೆಲ್ಲದಲ್ಲಿ, ಈ ಎಡೆಯಲ್ಲಿ, ನಮ್ಮಂತೆಯೇ ಇದ್ದು ಮೇಲಿದ್ದವರನ್ನು ಕಂಡಾಗ-ಆ ಬಗ್ಗೆ ಕೇಳಿದಾಗ – ಅವರನ್ನು ಗೌರವಾದರಗಳಿಂದ ಕಾಣುತ್ತೇವೆ. ಆರಾಧನಾ ಭಾವ ಬೆಳೆಯುತ್ತದೆ.

ಈ ದೃಷ್ಟಿಯಿಂದ ಕಂಡಾಗ ರಾಮಾಯಣ ಭಾರತಗಳು ಸರ್ವಜೀವಧರ್ಮಪ್ರತಿಬಿಂಬಕಗಳು. ಎಂತಲೇ ಸಾರ್ವಕಾಲಿಕ ಜನಾದರಣೆ ಪಡೆದಿವೆ. ವಿಶೃಂಖಲ ಜೀವಿಯಾಗಿ ಜಗತ್ತಿನಲ್ಲಿ ಮೂಡಿದ ಮನುಷ್ಯನಂತರ ಸಾಮಾಜಿಕ ನಿಯಮ ನಿಬದ್ಧನಾಗಿ ಶಿಸ್ತಿಗೆ ಒಳಪಡುತ್ತಾನೆ. ಆಗಾಗ ತಾನು ಈ ಮಾನವ ಧರ್ಮವನ್ನು ಧರಿಸದೆ ಹೋದರೂ ಹಾಗೆ ಧರಿಸಿದವರ ಬಗ್ಗೆ ಆದರ. ಆರಾಧನಾ ಭಾವ ಹೊಂದುತ್ತಾನೆ, ಹಾಗೆಂದೇ ರಾಮ ಲಕ್ಷ್ಮಣ ಭರತ ಸೀತೆ-ಒಬ್ಬೊಬ್ಬರೂ ಒಂದೊಂದು ಧರ್ಮದ ಪ್ರತೀಕವಾಗಿ, ಪ್ರಲೋಭಗಳಿಗೆ ಅತೀತರಾಗಿ ನಿಂತವರಾಗಿ ಪೂಜ್ಯರಾಗಿದ್ದಾರೆ.

ಅಹಲ್ಯೆ. ತಾರೆ, ಮಂಡೋದರಿ ಮೊದಲಾದವರು ವಿಧಿವಂಚಿತರಾದರೆ, ಕೈಕೇಯಿ, ಮಂಥರೆ ಮೊದಲಾದವರು ಕ್ಷಣ ದೂಷಣ ಕ್ರಿಯೆಯಿಂದ ಪಶ್ಚಾತ್ತಾಪ ಪಡುವರಂತೆ ದಿನವೂ ನಮ್ಮ ನಡುವಣ ಪಾತ್ರಗಳಂತೆಯೇ ಕಂಡು ಬರುತ್ತಾರೆ. ಇಂದ್ರಜಿತ್, ಕುಂಭಕರ್ಣರಿಗ ರಾವಣ ಮಾಡಿದ್ದು ಅಕೃತ್ಯವೆಂದು ತಿಳಿದರೂ ಕೂಡ ಪ್ರಭು ಪರಾಯಣರಾಗಿ ಪ್ರಾಣಾರ್ಪಣೆ ಮಾಡಿದರು ಬಹುಶಃ ಕುಂಭಕರ್ಣನಿಗೆ ಸೀತಾಪಹರಣದ ಸುದ್ದಿ ಅದರ ಪ್ರಯತ್ನದ ಹಂತದಲ್ಲೇ ತಿಳಿದಿದ್ದಲ್ಲಿ ಕಥೆ ಹೇಗೆ ನಡೆಯುತ್ತಿತ್ತೋ ಹೇಳಬರದು.

ಇಂತಹ ಧೀರರು, ರಣಕೋವಿದರು ಜೊತೆಗಿದ್ದರೂ, ಸರ್ವಲೋಕ ಕ್ಷೇಮಕರನಾಗಬೇಕಾಗಿದ್ದ ಮಹಾ ವ್ಯಕ್ತಿ ತನ್ನ ಪರನಾರೀಲೋಲತೆಯಿಂದ ಸರ್ವರಾಕ್ಷಸ ಕುಲಕ್ಷಯಕರ ನಾದ. ಇಂತಹ ಪಾತ್ರಗಳೂ ಸಾಮಾಜಿಕವಾಗಿ ಕಂಡುಬರುವಂತಹವೇ. ಹಾಗೆಂದೇ ಈ ಪಾತ್ರಗಳ ಬಗ್ಗೆಯೂ ಮನುಷ್ಯನ ಸಹಾನುಭೂತಿ.

ಇವೆಲ್ಲ ಒಂದು ತೂಕವಾದರೆ ಸೀತಾರಾಮರ ಕ್ಷಮಾಗುಣ ಮತ್ತೊಂದು ತೂಕ. ಅಗತ್ಯವಿಲ್ಲದ ಮಾಢ್ಯದಿಂದ ಎಲ್ಲರನ್ನೂ ಕಳೆದುಕೊಂಡು ಕಳೇಬರವಾದ ರಾವಣನ ಅಂತ್ಯಕ್ರಿಯೆಗಾಗಿ ಆಲೋಚಿಸುತ್ತಿದ್ದ ವಿಭೀಷಣನಿಗೆ-

ಕ್ರಿಯತಾಮಸ್ಯ ಸಂಸ್ಕಾರೋ ಮಮಾಪ್ಯೇಷ ಯಥಾತವ
ಮರಣಾಂತಾನಿ ವೈರಾಣಿ ನಿವೃತ್ತಂ ನಃ ಪ್ರಯೋಜನಃ

ಆತ ನಿನ್ನಂತೆಯೇ ನನಗೂ ಗೌರವಾಸ್ಪದ, ಮರಣದಿಂದ ವೈರವೂ ಕೊನೆ. ಅಣ್ಣನಿಗೆ ಅಂತ್ಯಕ್ರಿಯೆ ಮಾಡಬೇಕಾದ್ದೇ ಎನ್ನುವ ಶ್ರೀರಾಮನ ಮಾನವೀಯತೆ ಎಷ್ಟು ಅಸಾಧಾರಣವಾದದ್ದೊ ಅಶೋಕವನದಲ್ಲಿ ತನ್ನನ್ನು ಪೀಡಿಸಿದ ರಾಕ್ಷಸ ಸ್ತ್ರೀಯರನ್ನು ಕ್ಷಮಿಸ ಬಯಸಿದ ಸೀತೆಯ ಔದಾರ್ಯವೂ ಅಷ್ಟೇ ಉನ್ನತವಾದದ್ದು

ಹೀಗೆಂದಾಗ ರಾವಣವಧಾನಂತರ ರಾಮಸೀತಾ ಸಂವಾದದಲ್ಲಿ ಯಾವ ಧರ್ಮವೆಂಬ ಪ್ರಶ್ನೆ ಸಹಜ ಸಂಶಯಾತೀತವಾದ ಕಠೋರ ರಾಜಧರ್ಮವನ್ನು ಶ್ರೀರಾಮನಲ್ಲೂ, ಆ ಶಾಸನಕ್ಕೆ ತಲೆಬಾಗಿದ ಶಿಸ್ತಿನ ಸೀತೆಯ ನಿಷ್ಠುರ ಕರ್ತವ್ಯ ನಿರ್ವಹಣಾಭಾವವನ್ನೂ ಅಲ್ಲಿ ಕಾಣಬಹುದು.

ಆಂಜನೇಯ ಸುಗ್ರೀವ ಸಚಿವ ರಾಮದೂತ. ಅಪ್ರತಿಮಾನ ರಾಜನೀತಿಜ್ಞ. ಅವನಲ್ಲಿ ಅವಗುಣಗಳೇ ಇಲ್ಲವೆನ್ನುವಷ್ಟು ಹಿರಿಯ.

ಹೀಗೆ ಹಲವಾರು ಆರಾಧನಾರ್ಹ ಪಾತ್ರ, ಪರಿಸರಗಳಿರುವುದರಿಂದಲೇ ಇಂದು ರಾಮಾಯಣ ನಮ್ಮ ದೇಶದಲ್ಲೇ ಅಲ್ಲದೆ ಇತರ ದೇಶಗಳಲ್ಲೂ ಪ್ರೇಮ ಆದರ ಗೌರವಗಳನ್ನು ಹೊಂದಿ ಪ್ರತ್ಯೇಕ ಮಾನ್ಯತೆಯನ್ನು ಪಡೆದಿದೆ. ಮಾನವನಾಗಿ ಹುಟ್ಟಿ ಮಹಾಮಾನವನಾಗಿ ಪುರುಷೋತ್ತಮನಾಗಿ ಧರ್ಮ ಪ್ರತೀಕವಾಗಿಯೇ ವಾಲ್ಮೀಕಿಯ ರಾಮನ ಪ್ರಶಸ್ತಿ.

ಆದರೆ ಈ ಘನತೆಯೆಲ್ಲಾ ಯಾರಿಂದು! ಕಾವ್ಯದ ಕೊಂಬೆಯನ್ನೇರಿ ಮಧುರವಾಗಿ ಕೂಗುತ್ತಿರುವ ಕೋಗಿಲೆಯದು

ಕೂಜಂತಂ ರಾಮರಾಮೇತಿ ಮಧುರಂ ಮಧುರಾಕ್ಷರಮ್ ।
ಆರುಹ್ಯ ಕವಿತಾ ಶಾಖಾಂ ವಂದೇ ವಾಲ್ಮೀಕಿ ಕೋಕಿಲಮ್ ॥

# ಆದಿಕವಿ ವಾಲ್ಮೀಕಿ

ಕೂಜಂತಂ ರಾಮರಾಮೇತಿ
ಮದುರಂ ಮಧುರಾಕ್ಷರಂ।
ಆರುಹ್ಯ ಕವಿತಾ ಶಾಖಾಂ
ವಂದೇ ವಾಲ್ಮೀಕಿ ಕೋಕಿಲಂ॥

ಕವಿತೆ ಎಂಬ ಮರದ ಕೊಂಬೆಯನ್ನು ತ್ತಿ ಕುಳಿತು ರಾಮ, ರಾಮ ಎಂಬ ಧುರವಾದ ಮಧುರಾಕ್ಷರಗಳನ್ನು ೋಗಿಲೆಯಂತೆ ಕೂಗಿ ತಿಳಿಸಿದ ವಾಲ್ಮೀಕಿ ಯನ್ನು ವಂದಿಸುತ್ತೇನೆ.

ಯಃ ಕರ್ಣಾಂಜಲಿ ಸಂಪುಟೈರಹರಹಃ
ಸಮ್ಯಕ್ ಪಿಬತ್ಯಾದರಾತ್।
ವಾಲ್ಮೀಕೇ ರ್ವದನಾರವಿಂದಗಳಿತಂ
ರಾಮಾಯಣಾಖ್ಯಂ ಮಧು।
ಜನ್ಮವ್ಯಾಧಿ ಜರಾವಿಪತ್ತಿ ಮರಣೈಃ
ಅತ್ಯಂತ ಸೋಪದ್ರವಂ।
ಸಂಸಾರಂ ಸವಿಹಾಯಗಚ್ಛತಿ ಪುಮಾ್ನ್
ವಿಷ್ಣೋಃ ಪದಂ ಶಾಶ್ವತಂ

ವಾಲ್ಮೀಕಿ ಮಹರ್ಷಿಯ ವದನಾರವಿಂದ ಂದ ಸಂಪುಟ ರೂಪವಾಗಿ ಪರಿಪಕ್ವವಾಗಿ ಂದ ರಾಮಾಯಣವೆಂಬ ಕಾವ್ಯರೂಪ ಧುವನ್ನು ಯಾರು ಓದಿ, ಓದಿಸಿ ಳುವರೋ, ಕೇಳಿ ತಿಳಿಯುವರೋ ಂತಹವರು ಪುನರ್‌ಜನ್ಮ, ವ್ಯಾಧಿ, ಮುಪ್ಪು ತ್ಯಾದಿ ವಿಪತ್ತುಗಳಿಂದ ಮುಕ್ತರಾಗಿ, ಸಂಸಾರದಿಂದ ಬಿಡುಗಡೆ ಹೊಂದಿ ಪರ- ಮಾತ್ಮನ ಪಾದಾರವಿಂದಗಳಲ್ಲಿ ಶಾಶ್ವತ ಸುಖವನ್ನು ಹೊಂದುವರು.

ಇಂತಹ ಮಹಿಮೆ ರಾಮಾಯಣಕ್ಕೆ ಇದೆ. ಸಂಸ್ಕೃತ ಸಾಹಿತ್ಯದಲ್ಲಿ ರಾಮಾಯಣದ ಸ್ಥಾನ ಅತ್ಯಂತ ಹಿರಿದು. ಇದು ಸರ್ವ ಆಕರ್ಷಣೀಯವೂ ಆದರಣೀಯವೂ ಆಗಿದೆ. ರಾಮಾಯಣಕ್ಕೆ ಮುಂಚೆ ಛಂದೋಬದ್ಧ ವಾದ ಕಾವ್ಯ ಸಂಸ್ಕೃತದಲ್ಲಿ ಇಲ್ಲದಿದ್ದುದರಿಂದ ಇದು ಆದಿಕಾವ್ಯ. ಇದನ್ನು ರಚಿಸಿದ ಮಹಾವ್ಯಕ್ತಿ ಆದಿಕವಿ. ಕವಿಗಳ ಸಮೂಹಕ್ಕೆ ಕಿರೀಟಪ್ರಾಯನಾಗಿದ್ದಾನೆ. ವಾಲ್ಮೀಕಿಯು ಅತ್ಯಂತ ಹಿರಿಯ ಆದರ್ಶ ಕವಿ. ಲೋಕಾನುಭವವುಳ್ಳ ಸನಾತನ ಧರ್ಮದ ಕವಿ ಕೋಗಿಲೆ. ಲೋಕ ಕಲ್ಯಾಣಕ್ಕಾಗಿ ಸತತವಾಗಿ ಶ್ರಮಿಸಿದ ಮಹಾಮಹಿಮ. ಇಂತಹ ಮಹಾ ಮೇಧಾವಿಯೂ, ತಪೋಮಹಿಮನೂ ಆದ ಆದ ಮಹರ್ಷಿಯ ವಿಚಾರವಾಗಿ ಸ್ವಲ್ಪ ಮಟ್ಟಿನ ಪರಿಚಯ ಪಡೆಯಲು ಇಲ್ಲಿ ಪ್ರಯತ್ನಿಸಲಾಗಿದೆ.

ಪ್ರಾಚೀನ ಭಾರತದ ಬಹುಭಾಗವು ಗಿರಿ, ನದಿ, ವನಗಳಿಂದ ಕೂಡಿತ್ತು. ಅರಣ್ಯ ಭಾಗವೇ ಹೆಚ್ಚಾಗಿದ್ದ ಭಾರತದಲ್ಲಿ ದಂಡಕಾರಣ್ಯ, ಕಾಮ್ಯಕವನ, ಜನಸ್ಥಾನ- ಮುಂತಾದ ಭಾಗಗಳು ಪ್ರಸಿದ್ಧವಾಗಿದ್ದುವು. ಇಂತಹ ಅರಣ್ಯಭಾಗಗಳಲ್ಲಿ ಋಷಿಗಳು ಮುನಿಗಳು, ಆಶ್ರಮಗಳನ್ನು ಸ್ಥಾಪಿಸಿ, ತಪಸ್ಸು ಮಾಡುತ್ತಿದ್ದುದಲ್ಲದೆ ಗುರುಕುಲಗಳನ್ನು ನಿರ್ಮಾಣಮಾಡಿ, ವಿದ್ಯಾಪ್ರಚಾರ ಮಾಡುತ್ತಿದ್ದರು. ಹೀಗೆ ಅಲ್ಲಿ ಧರ್ಮಕಾರ್ಯ ಮತ್ತು ಪುಣ್ಯಕಾರ್ಯಗಳು ನಡೆಯುತ್ತಿದ್ದುದರಿಂದ, ಆ ಸ್ಥಳಗಳಲ್ಲಿ, ವಂಚಕರಾಗಲಿ ದುರಾಚಾರಿಗಳಾಗಲಿ, ನೀತಿಬಾಹಿರರಾಗಲಿ ಇರುತ್ತಿರಲಿಲ್ಲ. ಕಾಲಕಾಲಕ್ಕೆ ಮಳೆಯಾಗುತ್ತಿತ್ತು, ಕೃಷಿಕ್ಷೇತ್ರಗಳಲ್ಲಿ ವಿಪುಲವಾಗಿ ಬೆಳೆ ಬರುತ್ತಿತ್ತು, ಜನರು ಪರಸ್ಪರ ವಿಶ್ವಾಸದಿಂದ ಸುಖ ಶಾಂತಿಯಿಂದ ಕೂಡಿದ ಜೀವನ ನಡೆಸುತ್ತಿದ್ದರು.

ಅಂದಿನ ಪುಣ್ಯಾಶ್ರಮಗಳಲ್ಲಿ ವಾಲ್ಮೀಕಿ ಮಹರ್ಷಿಯ ಆಶ್ರಮವು ಬಹು ಪ್ರಸಿದ್ಧವಾಗಿದ್ದುದಲ್ಲದೆ, ಜನಪ್ರಿಯವಾಗಿಯೂ ಇದ್ದಿತು. ಅವರು ಹಿರಿಯ ಮೇಧಾವಿಗಳು, ಅದ್ಭುತ ಪಾಂಡಿತ್ಯ ಹೊಂದಿದವರು. ಅಪಾರ ಲೋಕ ಅನುಭವದಿಂದ ಲೋಕಕಲ್ಯಾಣಕ್ಕಾಗಿ ಸದಾ ಶ್ರಮಿಸುತ್ತಿದ್ದವರು. ವೇದಾಂತ ಶಾಸ್ತ್ರ ನಿಪುಣರು. ಅಸಾಧಾರಣ ಕವಿತಾ ಶಕ್ತಿ ಹೊಂದಿದ್ದವರು. ಇಡೀ ಕವಿ ಸಮೂಹಕ್ಕೆ ಕಿರೀಟಪ್ರಾಯರಾಗಿದ್ದ ಮಹಾ ಮಹಿಮರು.

ಹೀಗಿರುವಾಗ ಒಂದು ದಿವಸ, ತ್ರಿಲೋಕ ಸಂಚಾರಿ, ನಾರದ ಮಹರ್ಷಿಗಳು ವಾಲ್ಮೀಕಿ ಆಶ್ರಮಕ್ಕೆ ಬಂದರು. ಅವರ ಆಗಮನವನ್ನು ಕಂಡು ವಾಲ್ಮೀಕಿಮಹರ್ಷಿಗಳು ಅತ್ಯಂತ ಹರ್ಷಿತರಾಗಿ, ಅರ್ಘ್ಯ, ಪಾದ್ಯ, ಮಧುಪರ್ಕಾದಿಗಳಿಂದ ಉಪಚಾರಮಾಡಿ, ಕುಶಲಪ್ರಶ್ನೆ ಮಾಡಿ ಇರುತ್ತಿದ್ದಾಗ, ವಾಲ್ಮೀಕಿಯು ನಾರದರನ್ನು ಹೀಗೆ ಪ್ರಶ್ನೆ ಮಾಡಿದರು–

"ನಾರದರೇ! ಸಕಲ ಸದ್ಗುಣಗಳನ್ನು ಹೊಂದಿರುವ ವ್ಯಕ್ತಿ ಯಾರಾದರೂ ಇದ್ದಾರೆಯೇ? ಎಂತಹ ಕಷ್ಟದಲ್ಲೂ ಸತ್ಯವನ್ನೇ ಹೇಳುವವನೂ, ಸಮಸ್ತ ಪ್ರಾಣಿಗಳಿಗೆ ಸದಾ ಹಿತವನ್ನೇ ಬಯಸುವವನೂ, ದುರ್ಮಾರ್ಗಗಳನ್ನು ಸಂಪೂರ್ಣವಾಗಿ ಬಿಟ್ಟವನೂ, ಎಲ್ಲರಿಗೂ ಸದಾ ಪ್ರಿಯವನ್ನುಂಟುಮಾಡುವವನೂ, ಧೈರ್ಯಶಾಲಿಯೂ ಕರುಣಾಮಯನೂ, ಗುರು ಹಿರಿಯರಲ್ಲಿ ಸದಾ ಗೌರವ, ವಿಶ್ವಾಸವುಳ್ಳವನೂ, ಶತ್ರು ಸಂಹಾರಕನೂ ಆಗಿರುವ ಮಹಾವ್ಯಕ್ತಿ ಯಾರಾದರೂ ಇದ್ದರೆ ದಯವಿಟ್ಟು ತಿಳಿಸಬೇಕು" ಎಂದು ಕೇಳಿದನು.

"ಹೇ! ವಾಲ್ಮೀಕಿ ಋಷಿವರ್ಯಾ. ನೀವು ಹೇಳಿದ ಸಮಸ್ತ ಗುಣಗಳನ್ನು ಹೊಂದಿರುವ ಮನುಷ್ಯ ದೊರಕುವುದು ಬಹುಕಷ್ಟ. ಆದರೂ ಅಂತಹ ಒಬ್ಬ ಮಹಾವ್ಯಕ್ತಿ ಈ ಲೋಕದಲ್ಲಿ ಇದ್ದಾನೆ ಅವನು ಇಕ್ಷ್ವಾಕು ವಂಶದಲ್ಲಿ ಜನಿಸಿದ್ದಾನೆ. ದಶರಥ ಮಹಾರಾಜನ ಮಗನಾಗಿ ಅವತಾರ ಮಾಡಿದ್ದಾನೆ. ಅವನ ಹೆಸರು ಶ್ರೀರಾಮ. ಅವನೊಬ್ಬ ಆದರ್ಶಮಹಾಪುರುಷ. ಅತ್ಯಂತ ಸುಂದರನಾಗಿದ್ದಾನೆ. ಮಹಾ ಧೈರ್ಯಶಾಲಿ ಲೋಕ ಪ್ರಿಯನಾಗಿದ್ದಾನೆ. ನ್ಯಾಯವಾದಿ.

ಶ್ರೀ ಡಿ. ಕೃಷ್ಣೈಂಗಾರ್

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5–00 ಪ್ರಾ 5–30 | ಪ್ರಾ 5–00 ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 ಪ್ರಾ 6–00 | ಪ್ರಾ 5–30 ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 ಪ್ರಾ 6–30 | ಪ್ರಾ 6–00 ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 ಪ್ರಾ 7–00 | ಪ್ರಾ 6–30 ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 ಪ್ರಾ 7–30 | ಪ್ರಾ 7–00 ಪ್ರಾ 7–30 |
| ಸರ್ವದರ್ಶನ | ಪ್ರಾ 7–30 ಪ್ರಾ 10–00 | *ಅಭಿಷೇಕ ಪ್ರಾ 7–30 ಪ್ರಾ 8–30 |
| | | ಸಮರ್ಪಣ ಪ್ರಾ 8–30 ಪ್ರಾ 9–30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10–00 ಪ್ರಾ 10–30 | ಪ್ರಾ 9–30 ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | | ಪ್ರಾ 10–30 ಮ 12–00 |
| ಸರ್ವದರ್ಶನ | ಪ್ರಾ 10–30 ಸಂ 6–30 | ಪ್ರಾ 10–30 ಸಂ 6–30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6–30 ರಾ 7–00 | ಸಂ 6–30 ರಾ 7–00 |
| ಸರ್ವದರ್ಶನ | ರಾ 7–00 ರಾ 8–45 | ರಾ 7–00 ರಾ 8–45 |
| ಏಕಾಂತ ಸೇವೆ | ರಾ 8–45 ರಾ 9–00 | ರಾ 8–45 ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಧರ್ಮಾತ್ಮ ಮತ್ತು ಮಹಾಮಹಿಮೆಯುಳ್ಳವನು. ಸಮಸ್ತವನ್ನೂ ತಿಳಿದವನು. ಚಂದ್ರನಂತೆ ಸಂತೋಷವನ್ನುಂಟು ಮಾಡುವವನು. ಕೋಪದಲ್ಲಿ ಅಗ್ನಿಗೆ ಸಮಾನನು. ತಾಳ್ಮೆಯಲ್ಲಿ ಭೂದೇವಿಗೆ ಸಮನು. ತ್ಯಾಗದಲ್ಲಿ ಕುಬೇರನನ್ನು ಮೀರಿಸುವವನು. ಸತ್ಯದಲ್ಲಿ ಧರ್ಮದೇವತೆ ಇಂತಹ ಪರಿಶುದ್ಧನಾದ ಆದರ್ಶಪುರುಷನ ವಿಚಾರವನ್ನು ನೀನು ತಿಳಿಯುವುದು ಅಗತ್ಯ ಮತ್ತು ಸೂಕ್ತವಾಗಿದೆ. ಅವನ ಚರಿತ್ರೆಯನ್ನು ನಿನ್ನಂತಹ ಮಹಾಕವಿಯು ರಚಿಸುವುದು ಶ್ರೇಷ್ಠ. ಈ ವಿಷಯವನ್ನು ಹೇ! ಮಹರ್ಷೀ! ಸ್ವಲ್ಪ ಯೋಚಿಸು'' ಎಂದು ನಾರದನು ಹೇಳಿ ಹೊರಟುಹೋದನು.

ಆ ನಂತರ ವಾಲ್ಮೀಕಿಯು ಶಿಷ್ಯನಾದ ಭರದ್ವಾಜನೊಡನೆ ನಿತ್ಯ ಕರ್ಮಾನುಷ್ಠಾನಕ್ಕೆ ತಮಸಾನದಿಗೆ ಹೊರಡುವನು. ಬರುವಾಗ ದಾರಿಯ ಪಕ್ಕದಲ್ಲಿದ್ದ ಒಂದು ಮರದ ಮೇಲೆ ಎರಡು ಕ್ರೌಂಚಪಕ್ಷಿಗಳಲ್ಲಿ ಒಂದನ್ನು ಒಬ್ಬ ಬೇಡನು ತನ್ನ ಬಿಲ್ಲಿನಿಂದ ಹೊಡೆದು ಕೆಡಹುವನು. ಇನ್ನೊಂದು ಪಕ್ಷಿ ತನ್ನ ಸಂಗಡದ ಪಕ್ಷಿಯು ಸತ್ತುಬಿದ್ದು ಹೊರಳಿ ಸಂಕಟ ಪಡುವುದು. ಈ ದೃಶ್ಯವನ್ನು ಕರುಣಾಳುವಾದ ಋಷಿಯು ಕಂಡು ಮರುಗಿದನು. ಅವನ ಪ್ರಯತ್ನವಿಲ್ಲದೆಯೇ ಈ ಮಾತುಗಳು ಅವನ ವದನದಿಂದ ಹೊರಟವು.

ಮಾ ನಿಷಾದ ಪ್ರತಿಷ್ಠಾಂ
ತ್ವಮಗಮಶ್ಶಾಶ್ವತೀಸ್ಸಮಾಃ ।
ಯತ್ಕ್ರೌಂಚಮಿಥುನಾದೇಕಂ
ಅವಧೀಃ ಕಾಮಮೋಹಿತಃ

ಎಲೈ! ಬೇಡನೇ! ಕಾಮಕೇಳಿಯಲ್ಲಿ ಸಂತೋಷವಾಗಿದ್ದ ಎರಡು ಕ್ರೌಂಚಪಕ್ಷಿಗಳಲ್ಲಿ ಒಂದನ್ನು ನೀನು ಕಾರಣವಿಲ್ಲದೆ ಕೊಂದೆಯಾದುದರಿಂದ ನೀನು ಬಹುಕಾಲ ಬದುಕಲಾರೆ.'' ಈ ಮಾತು ಬಂದುದಕ್ಕಾಗಿ ಋಷಿಯು ಅನುತಾಪಪಟ್ಟನು.

ವಾಲ್ಮೀಕಿಯು ತನ್ನ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಹಿಂತಿರುಗಿ ಆಶ್ರಮಕ್ಕೆ ಬಂದರೂ ಪಕ್ಷಿಯ ವಿಚಾರವೇ ಅವನ

ನನ್ನನ್ನು ಬಾಧಿಸುತ್ತಿತ್ತು. ಈ ಯೋಜನೆಯಲ್ಲಿ ಮಗ್ನನಾಗಿದ್ದಾಗ ಬ್ರಹ್ಮದೇವನು ಅವನಿಗೆ ಪ್ರತ್ಯಕ್ಷನಾದನು. "ಹೇ ಋಷಿವರ್ಯಾ! ನಿನ್ನ ಮನಸ್ಸಿನ ದುಗುಡ ನನಗೆ ತಿಳಿದಿದೆ. ಶೋಕರೂಪನಾಗಿ ಬಂದು ನಿನ್ನ ಮಾತುಗಳು ಶ್ಲೋಕರೂಪದಲ್ಲಿ ಬಂದಿವೆ. ಇದನ್ನು ಮಂಗಳ ರೂಪದಲ್ಲಿ ಸ್ವೀಕಾರಮಾಡಬಹುದು. ನಾರದನು ನಿನಗೆ ಉಪದೇಶಮಾಡಿದ ಆದರ್ಶಪುರುಷನ ಚರಿತ್ರೆಯನ್ನು ರಚಿಸುವ ಸಂಕಲ್ಪವನ್ನು ನೀನು ಮಾಡಿರುವೆ. ಆ ಮಹಾಗ್ರಂಥಕ್ಕೆ ಈ ಶ್ಲೋಕವು ಮಂಗಳ ಶ್ಲೋಕವಾಗುವುದು ಎಂಬುದು ನನ್ನ ಸಂಕಲ್ಪ. ಆ ಮಹಾಮಹಿಮನ ಜೀವನದಲ್ಲಿ ನಡೆದ ಸಮಸ್ತ ಸನ್ನಿವೇಶಗಳೂ ಸಂದರ್ಭಗಳೂ, ಅಂಗೈನೆಲ್ಲಿಯಂತೆ ನಿನಗೆ ಗೋಚರವಾಗುವ ಹಾಗೆ ನಾನು ಸಂಕಲ್ಪ ಮಾಡಿರುವೆನು. ಅಂತಹ ಸತ್ಯವಾದ ಸುಂದರವಾದ, ಮಂಗಳಕರವಾದ ಕಥೆಯನ್ನು ನೀನು ರಚಿಸು. "ಇದು ಪವಿತ್ರ ಗ್ರಂಥವಾಗುವುದಲ್ಲದೆ, ಇದನ್ನು ಓದಿ, ಕೇಳಿಸಿ ಕೇಳಿದವರ ಸಮಸ್ತ ತಾಪಗಳು ಪರಿಹಾರವಾಗುವುವು" ಎಂದು ಹೇಳಿ ಬ್ರಹ್ಮದೇವನು ಮಾಯವಾದನು.

ಹೀಗೆ ವಾಲ್ಮೀಕಿ ಮಹರ್ಷಿಗೆ ಬ್ರಹ್ಮದೇವನಿಂದ ದೊರೆತ ವರ ಅವನ ಭಾಗ್ಯವಾದುದೇ ಅಲ್ಲದೆ ಜಗತ್ತಿನ ಮಹಾಭಾಗ್ಯವೂ ಆಯಿತು. ಲಕ್ಷ್ಮಣ, ಭರತ ಶತ್ರುಘ್ನರನ್ನು ತನ್ನ ಸೋದರರನ್ನಾಗಿಯೂ, ಸೀತಾದೇವಿಯನ್ನು ಪತ್ನಿಯನ್ನಾಗಿಯೂ, ಆಂಜನೇಯನನ್ನು ಆದರ್ಶ ಸೇವಕನನ್ನಾಗಿಯೂ ಪಡೆದ ಶ್ರೀರಾಮಚಂದ್ರನ ಪುಣ್ಯಕಥೆ ವಾಲ್ಮೀಕಿ ಮಹರ್ಷಿಯ ಮಹಾಗ್ರಂಥದ ಕಾವ್ಯವಸ್ತುವಾದುದಲ್ಲದೆ, ಆ ಗ್ರಂಥ ಆದಿಕಾವ್ಯವಾಯಿತು. ಅದನ್ನು ರಚಿಸಿದ ಆದಿಕವಿ, ಶ್ರೀ ಕವಿಕುಲ ಸಮೂಹಕ್ಕೆ ಕಿರೀಟಪ್ರಾಯನಾಗಿ ಪ್ರಕಾಶಿಸುತ್ತಿದ್ದಾನೆ.

ಭಗವಾನ್ ವಾಲ್ಮೀಕಿಯು ಸ್ವತಃ ಅದ್ಭುತ ಪಾಂಡಿತ್ಯವುಳ್ಳವನು, ಅಪಾರ ಕವಿತಾಶಕ್ತಿ ಪಡೆದವನು. ಲೋಕ ಕಲ್ಯಾಣಕ್ಕಾಗಿ ಶ್ರಮಿಸುತ್ತಿರುವ ಮಹಾಮಹಿಮನು. ಇಂತಹ ಮಹಾವ್ಯಕ್ತಿಗೆ ಬ್ರಹ್ಮದೇವನ ವರವೂ ನಾರದಮಹರ್ಷಿಯ ಉಪದೇಶವೂ ದೊರೆತ ಮೇಲೆ ಅವನ ಗ್ರಂಥ ರಚನಾಶಕ್ತಿಯು ಸುವರ್ಣಕ್ಕೆ ಮೆರಗುಕೊಟ್ಟಂತೆ ಪ್ರಸಿದ್ಧವೂ ಪವಿತ್ರವೂ ಆಯಿತು. ಮಹಾಕಾವ್ಯದ ಲಕ್ಷಣಗಳೆಲ್ಲ ಆ ಗ್ರಂಥದಲ್ಲಿ ಅಡಕವಾದುವು. ವಾಲ್ಮೀಕಿಯ ಪ್ರಯತ್ನ ಪರಿಪೂರ್ಣವೂ, ಪರಿಪಕ್ವವೂ ಆಗಿ, ಅವನು ರಚಿಸಿದ ಮಹಾಗ್ರಂಥ,ಮಹತ್ಕೃತಿಯೂ,ಅಮರಕೃತಿಯೂ ಮತ್ತು ಸತ್ಕೃತಿಯೂ ಆಯಿತು. ಮಹರ್ಷಿಯು ಕವಿಕುಲ ತಿಲಕನೆಂದು ಪ್ರಸಿದ್ಧನೂ ಆದನು.

ಹೀಗೆ ವಾಲ್ಮೀಕಿ ಮಹರ್ಷಿಯು ರಚಿಸಿದ ರಾಮಾಯಣವೆಂಬ ಆದಿಕಾವ್ಯ ಬಹು ಸೊಗಸಾಗಿದೆ. ಕವಿತಾ ಲಕ್ಷಣದಲ್ಲಿ, ಕಥಾ ನಿರೂಪಣೆಯಲ್ಲಿ, ವರ್ಣನಾವೈಖರಿಯಲ್ಲಿ, ಉಪಮಾನ ಉಪಮೇಯಗಳಲ್ಲಿ, ಪಾತ್ರ ಸೃಷ್ಟಿಯಲ್ಲಿ, ಸೊಗಸು ಉಕ್ಕಿ ಹರಿಯುತ್ತದೆ ಇವುಗಳ ಜೊತೆಗೆ ಪುತ್ರ ವಾತ್ಸಲ್ಯ ಪಿತೃಭಕ್ತಿ, ಸಹೋದರ ಪ್ರೇಮ, ಸ್ವಾಮಿಭಕ್ತಿ ಮುಂತಾದ ಸದ್ಗುಣಗಳು ಸರ್ವೋತ್ತಮ ರೀತಿಯಲ್ಲಿ ಉದಹರಿಸಲ್ಪಟ್ಟಿವೆ. ಅನೇಕ ವೈದಿಕ, ಲೌಕಿಕ ನೀತಿ ಧರ್ಮಗಳು ನಿರೂಪಿತವಾಗಿವೆ.

ಶ್ರೀ ರಾಮ ಚರಿತವು, ವಾಲ್ಮೀಕಿ ಮಹರ್ಷಿಯ ಸೃಷ್ಟಿಯಲ್ಲ. ಕಲ್ಪಿಸಿದ ಕಥೆಯೂ ಅಲ್ಲ. ನಾರದನ ಉಪದೇಶದಂತೆ, ಬ್ರಹ್ಮದೇವನ ವರಬಲದಿಂದ ಮಹರ್ಷಿಗೆ ಎಲ್ಲವೂ ಗೋಚರವಾಯಿತು. ಆದರೂ ಭಗವಾನ್ ವಾಲ್ಮೀಕಿಯು ತನ್ನ ಕವಿತಾಶಕ್ತಿಯನ್ನು ಕಾವ್ಯಲಕ್ಷಣಗಳನ್ನು ಪ್ರದರ್ಶನ ಮಾಡಿ,ಸರ್ವೋತ್ತಮವಾದ, ಜಗತ್ಪ್ರಸಿದ್ಧವಾದ ರಾಮಾಯಣವನ್ನು ರಚಿಸಿ ಕವಿಕುಲ ತಿಲಕನಾಗಿದ್ದಾನೆ.

ಹೀಗೆ ರಾಮಾಯಣವು ಬಹು ಕಾಲದಿಂದ ಸ್ಫೂರ್ತಿಯನ್ನುಂಟುಮಾಡುವ ಧರ್ಮಗ್ರಂಥವಾಗಿದೆ. ಬೋಧಪ್ರದವೂ, ಪ್ರೇರಕವೂ ಆಗಿರುವುದಲ್ಲದೆ, ಉತ್ತಮ ಸ್ನೇಹಿತನಂತೆ, ದಾರ್ಶನಿಕನಂತೆ ಪ್ರಯೋಜಕವಾಗಿದೆ. ಇದು ಎಲ್ಲಕಾಲಕ್ಕೂ, ದೇಶಕ್ಕೂ, ಎಲ್ಲ ಜನರಿಗೂ

(35 ನೇ ಪುಟ ನೋಡಿ)

# ಕವಿಕುಲ ಗುರು ವಾಲ್ಮೀಕಿ

ಭರತ ಭೂಮಿಯ
ಪುಣ್ಯ ಮೂರುತಿ
ಅವನೆ ಮಹಋಷಿ ವಾಲ್ಮೀಕಿ।
ರಾಮನ ಸ್ಮರಿಸಿ
ಮುನಿಗಳ ಕರೆಸಿ
ಪೇಳಿದ ಕತೆಯನು ವಾಲ್ಮೀಕಿ ॥

ದಶರಥ ಸುತನ
ನರಕುಲ ಶ್ರೇಷ್ಠನ
ಕತೆಯನು ಬರೆದ ಮುದದಿಂದ।
ಸೀತೆಯ ಚರಿತೆಯ
ಕವಿಕುಲ ವಾರ್ತೆಯ
ಹೇಳಿದ ಅಯನವ ಹಿತದಿಂದ ॥

ಸುಂದರ ಚಿತ್ರಣ
ರಮ್ಯದ ವರ್ಣನ
ಕೇಳಲು ಹಿತವು ಕಿವಿಗಳಿಗೆ।
ಸ್ಫೂರ್ತಿಯ ಕೇಂದ್ರ
ಆದಿ ಕಾವ್ಯವು
ಚೇತನದಾಯಕ ಕವಿಗಳಿಗೆ ॥

ಕವಿಗಳ ಶ್ರೀಕರ
ಭಾರತ ಭಾಸ್ಕರ
ವಾಲ್ಮೀಕಿ ಕವಿವರ ತಾ ಶ್ರೇಷ್ಠ।
ಶ್ರೀ ರಾಮಾಯಣವು
ಓದಲು ಚೆನ್ನವು
ಆದಿ ಕಾವ್ಯವು ನಮಗಿಷ್ಟ ॥

"ಕವಿತಾಕೃಷ್ಣ"

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿ ಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನೇ ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗದಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾ ಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
(2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ
ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ**
**ತಿ. ತಿ. ದೇ. ತಿರುಪತಿ.**

# ಸಾಕೇತ -ಮಹಾಕಾವ್ಯ

'ಮೈಥಿಲಿ ರಾಮಾಯಣ'—ಎಂದು ವ್ಯವಹಾರ ರುವ ಹಿಂದಿ ಭಾಷೆಯ ಮಹಾನ್ ವ್ಯ, ಸಾಕೇತ. ಇದರ ಕರ್ತೃ, ಖ್ಯಾತನಾಮ ದ ಶ್ರೀ ಮೈಥಿಲೀಶರಣ ಗುಪ್ತರು. ಸಾಕೇತದ ಮೂಲಕ ಶ್ರೀರಾಮನ ಕಥೆಯನ್ನಾಗಲೀ, ಮಾಯಣದ ಕಥೆಯನ್ನಾಗಲೀ ಹೇಳುವುದು ಕರ ಉದ್ದೇಶವಲ್ಲ. ವಾಲ್ಮೀಕಿ ರಾಮಾಯಣದಲ್ಲಿ ವು ಪಾತ್ರಗಳು ಶ್ರೀರಾಮನ, ಪುರುಷೋತ್ತ ತ್ವಕ್ಕೆ ಪೋಷಕವಾಗಿದ್ದರೂ ಹೆಚ್ಚು ಪ್ರಧಾನತೆ ನ್ನು ಪಡೆಯದೆ ಮರೆಯಲ್ಲಿ ನಿಂತಿವೆ ಇವು ಮತ್ತು ಇಂತಹ ಮರೆಯಲ್ಲಿರುವ ಘಟನೆಗಳ ಶಿಷ್ಟಗಳನ್ನು ತಿಳಿಸಿಕೊಡುವುದೇ ಈ ಕಾವ್ಯದ ಮುಖ್ಯ ಉದ್ದೇಶ

ಸಾಮಾನ್ಯವಾಗಿ ಶ್ರೀರಾಮನ ಜನನದಿಂದ ಪ್ರಾರಂಭಿಸಿ ರಾವಣನ ಸಂಹಾರದ ನಂತರ, ನನು ಅಯೋಧ್ಯೆಗೆ ಹಿಂತಿರುಗಿ ಪಟ್ಟಾಭಿಷಿಕ್ತ ಗುವವರೆಗಿನ ಕಥಾಭಾಗವನ್ನು ಕ್ರಮವಾಗಿ ಹೇಳುವುದು ವಾಲ್ಮೀಕಿರಾಮಾಯಣವನ್ನು ಸುಸರಿಸಿರುವವರ ಒಂದು ಸಂಪ್ರದಾಯ. ಆದರೆ ಮೈಥಿಲೀ ಶರಣಗುಪ್ತರು ಈ ಸಾಂಪ್ರದಾಯಿಕ ಲಯನ್ನು ಬಿಟ್ಟು ತಮ್ಮದೇ ಆದ ಹೊಸರೀತಿ ಯಲ್ಲಿ ಶ್ರೀರಾಮನ ಕಥೆಯನ್ನು ಹೇಳಿದ್ದಾರೆ. ದಕ್ಕಾಗಿ ಅವರು ಅನೇಕ ಹೊಸಘಟನೆಗಳನ್ನು ಲ್ಪಿಸಿ ವಾಲ್ಮೀಕಿ ರಾಮಾಯಣದಲ್ಲಿ ಮರೆಯಲ್ಲಿ ವ ವ್ಯಕ್ತಿಗಳನ್ನು ಬೆಳಕಿಗೆ ತಂದಿದ್ದಾರೆ. ಈ ಹೊಸ ಕಲ್ಪನೆಗಳು ರಾಮಾಯಣದ ಕಥೆಯ ಮಗ್ರತೆಯನ್ನು ಕಾಪಾಡಲು ಸಹಾಯಕವಾಗಿ ಯೇ ಪನಾ ವಿರೋಧಗಳಾಗಿಲ್ಲ. ಈಗ ಆ ಹೊಸ ಘಟನೆ ಗಳಲ್ಲಿ ಕೆಲವು ಮುಖ್ಯವಾದುವು ಗಳನ್ನು ಇಲ್ಲಿ ನೋಡೋಣ.

ಊರ್ಮಿಳಾ – ಲಕ್ಷ್ಮಣರು :

ಸಾಕೇತ ಕಾವ್ಯದಲ್ಲಿ ಇವರಿಬ್ಬರ ಬಾಳುವೆ ಮತ್ತು ಕಾರ್ಯಗಳಿಗೆ ಪ್ರಧಾನತೆಯಿದೆ. ಗ್ರಂಥಾ ರಂಭದಲ್ಲಿಯೇ ಇವರಿಬ್ಬರ ಪ್ರೇಮಮಯ ಜೀವನ ನ್ನು ಕವಿ ಪರಿಚಯ ಮಾಡಿಕೊಡುತ್ತಾರೆ. ವರ ವಿನೋದ ಸಂಭಾಷಣೆ, ಹಾಸ್ಯ—ಪ್ರತಿ ಹಾಸ್ಯ—ಇವು ಆ ದಂಪತಿಗಳ ಅನುರೂಪವ್ಯ ಯಾಗೂ ಅನುರಾಗಕ್ಕೆ ಸಂಕೇತವಾಗಿದೆ. ಊರ್ಮಿ ಗೆ—ಲಕ್ಷ್ಮಣ; ಲಕ್ಷ್ಮಣನಿಗೆ—ಊರ್ಮಿಳೆ—ಪರಸ್ಪರ ತ್ಯ ನೂತನರಾಗಿಯೇ ಕಾಣುತ್ತಾರೆ.

ವನವಾಸಗಮನಾನಂತರ, ಲಕ್ಷ್ಮಣ—ಊರ್ಮಿ ಯರು ಪರಸ್ಪರ ಮಿಲನವಾಗುವುದು ಚಿತ್ರಕೂಟ ಲ್ಲಿ, ಭರತನಿಗೆ ಶ್ರೀರಾಮನು ಪಾದುಕೆಗಳನ್ನು ಕೊಡುವುದಾಗಿ ಒಪ್ಪಿಕೊಳ್ಳುತ್ತಾನೆ. ಆಗ ಎಲ್ಲ ಗೂ ಸಂತೋಷವಾಗುತ್ತದೆ. ಆ ಸಮಯದಲ್ಲಿ ತೆಗೆ, ಎಲ್ಲರಿಗೂ "ವನ-ಉಪಾಹಾರ"ವನ್ನು ಹಂಚಬೇಕು—ಎನ್ನಿಸುತ್ತದೆ. ಎಲೆಮನೆಯಲ್ಲಿದ್ದ ದೊನ್ನೆಗಳನ್ನು ತರುವಂತೆ ಸೀತೆ ಲಕ್ಷ್ಮಣನಿಗೆ ಹೇಳುತ್ತಾಳೆ. ಲಕ್ಷ್ಮಣ ಎಲೆಮನೆಯೊಳಗೆ ಪ್ರವೇ ಶಿಸಿದಾಗ ಮೂಲೆಯಲ್ಲಿ ಕುಳಿತಿದ್ದ ಊರ್ಮಿಳೆ ಕಾಣುತ್ತಾಳೆ ಇಬ್ಬರಿಗೆ ಖುಷಿಯೊಡನೆ ಏನೇನೋ ಮಾತನಾಡಬೇಕೆಂದು ಆಸೆ. ಆದರೆ ಭಾವಾತಿ ರೇಕದಿಂದ ಮಾತು ಹೊರಡದೆ ಮೂಕರಾಗಿ, ಪತಿಪತ್ನಿಯರ ಆನಂದವನ್ನು ಅನುಭವಿಸುತ್ತಾ ಕುಳಿತು ಬಿಡುತ್ತಾರೆ. ಲಕ್ಷ್ಮಣನಿಗೂ ಆಶ್ಚರ್ಯ ಮತ್ತು ಕಾತರ. ಇಲ್ಲಿ ಇವರಿಬ್ಬರ ಅಗಾಧ ಪ್ರೇಮ, ಅನುರಾಗಸ್ನೇಹ—ಇವು ಚೆನ್ನಾಗಿ ಚಿತ್ರಿತ ವಾಗಿವೆ

## ಶ್ರೀ ಕೆ. ಜಗನ್ನಾಥ ಶಾಸ್ತ್ರಿ

ಊರ್ಮಿಳೆ—ಲಕ್ಷ್ಮಣರು ಮತ್ತೆ ಸೇರುವುದು, ಹದಿನಾಲ್ಕು ವರ್ಷಗಳನಂತರ ಶ್ರೀರಾಮನೊಡನೆ, ಲಕ್ಷ್ಮಣನು ಅಯೋಧ್ಯೆಗೆ ಬಂದಾಗ. ದೀರ್ಘ ಅವಧಿಯ ನಂತರ ಉಂಟಾದ ಈ ಮಿಲನದ ಸುಖ ವನ್ನು ವಿವರವಾಗಿ ಚಿತ್ರಿಸುತ್ತಾನೆ. ಅಯೋಧ್ಯೆಯ ಇತಿಹಾಸ ಮೊದಲಾದವನ್ನು ಅನುಭವಿಸ ಲಾಗದ ಆನಂದವನ್ನು ಇವರಿಬ್ಬರು ಇಲ್ಲಿ ಅನುಭ ವಿಸಿದ್ದಾರೆ.

ಈ ನವ ಕಲ್ಪನೆಯ ಚಿತ್ರಣ, ತನ್ಮೂಲಕ ವಿಶ್ಲೇಷಿಸಲ್ಪಟ್ಟಿರುವ ಊರ್ಮಿಳಾ ಲಕ್ಷ್ಮಣರ ಮನೋವ್ಯಾಪಾರ ಇನ್ನಾವ ಕಾವ್ಯಗಳಲ್ಲಿಯೂ ಸಿಕ್ಕುವುದಿಲ್ಲ. ಸಾಕೇತ — ಕಾವ್ಯವಾಗಿರುವುದು; ಮೈಥಿಲೀ ಶರಣಗುಪ್ತರು ಸಾರ್ಥಕನಾಮರಾಗಿರು ವುದು, ಈ ವಿಶ್ಲೇಷಣೆಯಿಂದಲೇ.

ಕೈಕೇಯಿಯ ದೋಷ ರಹಿತ ವ್ಯಕ್ತಿತ್ವ: ಸಾಮಾನ್ಯವಾಗಿ ದುಷ್ಟೆ, ನಿಷ್ಕರುಣಿ—ಮುಂತಾಗಿ ಕರೆಸಿಕೊಳ್ಳುವ ಕೈಕೇಯಿಯನ್ನು ಶ್ರೀ ಗುಪ್ತರು ಮನೋವೈಜ್ಞಾನಿಕವಾಗಿ ವಿಶ್ಲೇಷಿಸಿ, ಇವಳು ನಿರ್ದೋಷಿ—ಎನ್ನುವುದನ್ನು ಸ್ಪಷ್ಟಪಡಿಸಿದ್ದಾರೆ.

ಪ್ರಥಮದಲ್ಲಿ ಕೈಕೇಯಿಯು ಮುಗ್ಧಳಾದ, ವಾತ್ಸಲ್ಯಮಯಿಯಾದ ತಾಯಿಯಾಗಿಯೇ ಚಿತ್ರಿತಳಾಗಿದ್ದಾಳೆ ಅವಳ ಮನಸ್ಸು ಆಕಾಶದಷ್ಟು ವಿಶಾಲವಾದದ್ದು. ಮಂಥರೆಯು ಬಂದು ಶ್ರೀ ರಾಮನ ಪಟ್ಟಾಭಿಷೇಕದ ವಿಷಯವನ್ನು ತಿಳಿಸಿ ದಾಗ ಕೈಕೇಯಿಗೂ ಸಹ ಆನಂದವಾಗುತ್ತದೆ. ಮಂಥರೆಯು ಮತ್ತೆ ಮತ್ತೆ ಕೆಣಕುತ್ತಾ ಮಾತ ನಾಡುತ್ತಿದ್ದರೂ ಇವಳಲ್ಲಿ ಯಾವ ವಿಕಾರವೂ ಉಂಟಾಗುವುದಿಲ್ಲ. ಅಷ್ಟೇ ಅಲ್ಲ ಮಂಥರೆಯನ್ನು— "ದ್ವಿ ಜಿಹ್ವೆ! ಇಸ್ ಸೇ ಏಸ್ ಮತ್ ಬೋಲ್" (ಚಾಡಿಕೋರಳೇ, ಇಲ್ಲಿ ವಿಷವನು ಬೆರೆಸ ದಿರು)—ಎಂದು ಕೋಪದಿಂದ ಕ್ರೂರವಾಗಿ ನುಡಿ ಯುತ್ತಾಳೆ. ಆಗ ಕೈಕೇಯಿಯ ದೃಷ್ಟಿ ತೀಕ್ಷ್ಣ ವಾಗಿತ್ತು; ಹುಬ್ಬು ಗಂಟಿಕ್ಕಿದ್ದುವು; ಕಪೋಲಗಳು ಕೆಂಪೇರಿದ್ದುವು. ಇದನ್ನು ಕಂಡ ಮಂಥರೆಗೂ ಕ್ಷಣಕಾಲ ಭಯವುಂಟಾಯಿತು. ಉಪಾಯ ಶಾಲಿಯಾದ ಮಂಥರೆ ಕೊನೆಗೆ ಕೈಕೇಯಿಯಲ್ಲಿ— ಕೌಸಲ್ಯೆಯ ವಿರುದ್ಧ ಸವತಿಮಾತ್ಸರ್ಯವನ್ನ ಕೆಣಕಿ, ಕೆರಳಿಸುವುದರಲ್ಲಿ, ಸಮರ್ಥ ಳಾದಳು. "ಕೌಸಲ್ಯೆಯ ಕುಟಿಲಾಲೋಚನೆ ಯಿಂದಲೇ, ಭರತನಿಲ್ಲದ ವೇಳೆಯಲ್ಲಿ ಶ್ರೀರಾಮ ನಿಗೆ ಪಟ್ಟಾಭಿಷೇಕ ನಡೆಯುತ್ತಿದೆ; ಭರತನಂತಹ ಮಗನ ಮೇಲೂ ಸಂದೇಹ! ಅವನನ್ನು ಮನೆಗೆ ಕರೆಸುವಷ್ಟೂ ಮನಸ್ಸು ಮಾಡಿಲ್ಲ" ಎಂದು ಹೇಳಿ ಕೈಕೇಯಿಯಲ್ಲಿ ಸವತಿ ಮಾತ್ಸರ್ಯದ ಹೆಡೆಯೆತ್ತಿಸಿ ಮಂಥರೆ, ಹೊರಟು ಹೋಗುತ್ತಾಳೆ.

ಮಂಥರೆಯ ಕೊನೆಯಮಾತು ಕೈಕೇಯಿಯಲ್ಲಿ ಅನುರಣಿತವಾಗತೊಡಗಿತು. ರಾಮನ ಮೇಲೆ ದ್ವೇಷ, ಭರತನ ಮೇಲೆ ವಾತ್ಸಲ್ಯ ಅಧಿಕವಾಗ ತೊಡಗಿತು. ಜೊತೆಯಲ್ಲಿಯೇ ಸವತಿ ಮಾತ್ಸ ರ್ಯವೂ ಹೆಡೆಯೆತ್ತಿತು. ಈಗ ಕೈಕೇಯಿ ಸ್ತ್ರೀ ಸಹಜವಾದ ಮನೋದೌರ್ಬಲ್ಯಕ್ಕೆ ಈಡಾಗು ತ್ತಾಳೆ. ಮಮತಾಮಯಿಯಾಗಿದ್ದವಳು ನಿರ್ದಯಿ ಕ್ರೂರ ಚಂಡಿಯಾಗುತ್ತಾಳೆ. ಅಧಿಕಾರ ದಾಹ, ಸ್ವಾರ್ಥ ಚಿಂತನೆಗಳು ರಾಣಿಯಾದ ಕೈಕೇಯಿ ಯನ್ನು ಎತ್ತಲೋ ಕೊಂಡೊಯ್ಯುತ್ತವೆ. ಭಾವಾತಿರೇಕದ ದುಷ್ಟಶಕ್ತಿಯ ಬಲೆಯಲ್ಲಿ ಸಿಕ್ಕು ಬಿದ್ದ ಅವಳು, ಸಂಪೂರ್ಣವಾಗಿ ಕಠೋರ ಮೂರ್ತಿಯಾಗುತ್ತಾಳೆ. ಅವಳು ಈ ಕಠೋ

ರತೆಯು ಪರಾಕಾಷ್ಠತೆಯಲ್ಲಿರುವಾಗಲೇ ದಶರಥ ಅಲ್ಲಿಗೆ ಬರುತ್ತಾನೆ. ತಾನು ಕೊಟ್ಟ ವರಗಳನ್ನು ನೆನಪಿಸಿ, ಸಾಂತ್ವನ ಗೈಯಲೆತ್ನಿಸುತ್ತಾನೆ.

ಈ ಅವಕಾಶ ಸಿಕ್ಕ ತಕ್ಷಣವೇ ಕೈಕೇಯಿ, ಶ್ರೀರಾಮನ ವನಗಮನ ಮತ್ತು ಭರತನಿಗೆ ಪಟ್ಟಾಭಿಷೇಕ— ಈ ವರಗಳನ್ನು ಕೇಳುತ್ತಾಳೆ. ಆ ಅವಳಲ್ಲಿ ಅವುಗಳ ಪರಿಣಾಮವನ್ನು ವಿಮರ್ಶಿಸಲೂ ಮನೋಸ್ಥೈರ್ಯವಿರುವುದಿಲ್ಲ. ಅನಂತರ ರಾಮಲಕ್ಷ್ಮಣ ಸೀತೆಯರು ಅಯೋಧ್ಯೆಯನ್ನು ಬಿಟ್ಟಾಗಲೂ, ದಶರಥ ಮರಣ ಹೊಂದಿ, ತಾನು ವಿಧವೆಯಾಗಿ, ಸಂಪೂರ್ಣ ಅಯೋಧ್ಯೆಯೇ ಶೋಕವಿಹ್ವಲವಾಗಿದ್ದಾಗಲೂ, ಕೈಕೇಯಿ ಕಠೋರ ಮೂರ್ತಿಯಾಗಿಯೇ ಇರುತ್ತಾಳೆ. ಭರತ ಅಭಿಷಿಕ್ತನಾದ ಚಕ್ರವರ್ತಿಯಾಗಬೇಕು, ರಾಜಮಾತೆಯಾಗಬೇಕು— ಇದೇ ಅವಳ ಹೃದಯದಲ್ಲಿ ನಡೆಯುತ್ತಿದ್ದ ಚಿಂತನೆ.

ಭರತ ಅಯೋಧ್ಯೆಗೆ ಬಂದು ತಾಯಿಗೆ ನಮಸ್ಕರಿಸಿದಾಗ — "ನಾನು ಚಿರಕಾಲ ನರಕವನ್ನು ಭೋಗಿಸಲೂ ಸಿದ್ಧನಿದ್ದೇನೆ. ವತ್ಸ, ಏಳು, ರಾಜ್ಯವಾಳು". ಎನ್ನುತ್ತಾಳೆ, ಕೈಕೇಯಿ. ಆದರೆ ಅಷ್ಟೇ ನಿಷ್ಠುರವಾಗಿ ಭರತ, ತಾಯಿಯ ಬೇಡಿಕೆಯನ್ನು ತಿರಸ್ಕರಿಸುತ್ತಾನೆ; ಅಷ್ಟೇ ಕಠೋರವಾಗಿ ಅವಳನ್ನು ತುಚ್ಛೀಕರಿಸುತ್ತಾನೆ.

ಕೈಕೇಯಿಗೆ ಈಗ ತನ್ನ ತಪ್ಪಿನ ಅರಿವಾಗುತ್ತದೆ. ಪಶ್ಚಾತ್ತಾಪದ ಜ್ವಾಲೆ ಈಗ ಅವಳನ್ನು ಸುಡತೊಡಗುತ್ತದೆ. ಕ್ಷಣಿಕವಾದ ಭಾವೋದ್ರೇಕಕ್ಕೆ ಒಳಗಾಗಿ ಎಂತಹ ಪ್ರಮಾದಗಳಿಗೆ ಕಾರಣಳಾದೆನಲ್ಲಾ—ಎಂದು ಪರಿತಪಿಸುತ್ತಾಳೆ. ಚಿತ್ರಕೂಟಕ್ಕೆ ರಾಮನನ್ನು ಕಾಣಲು ಎಲ್ಲರೊಡನೆ ಕೈಕೇಯಿಯೂ ಬರುತ್ತಾಳೆ. ಅಲ್ಲಿಯವರೆಗೆ ಅವಳು ಯಾರೊಡನೆಯೂ ಮಾತನಾಡಿರುವುದಿಲ್ಲ. ಶ್ರೀರಾಮನನ್ನು ಕಂಡಾಗ ತನ್ನಿಂದಾದ ಎಲ್ಲ ಅಪರಾಧಗಳನ್ನೂ ಒಪ್ಪಿಕೊಳ್ಳುತ್ತಾಳೆ. ಅವಳು ಯಾರನ್ನೂ ದೂಷಿಸುವುದಿಲ್ಲ. ಈ ಎಲ್ಲ ಅನರ್ಥಗಳಿಗೆ ಪ್ರಚೋದನೆ ನೀಡಿದ ಮಂಥರೆಯನ್ನೂ ಸಹ, ಇವಳು, ನಿರಪರಾಧಿ ಎನ್ನುತ್ತಾ "ದಾಸಿಯಾದ ಮಂಥರೆಯು ತಾನೇ ಏನು ಮಾಡಿಯಾಳು? ನನ್ನ ಮನಸ್ಸೇ ನನ್ನನ್ನು ನಂಬಲಾರದೆ ಹೋಯಿತು" ಎಂದು ತನ್ನನ್ನೇ ಅಪರಾಧಿಯನ್ನಾಗಿ ನಿರ್ಧರಿಸಿಕೊಳ್ಳುತ್ತಾಳೆ. ವಜ್ರಾದಪಿ ಕಠೋರವಾಗಿದ್ದ ಅವಳ ಹೃದಯ ಈಗ ಕುಸುಮಾದಪಿ ಮೃದುವಾಗಿದೆ.

ಹೀಗೆ, ಪರಿಸ್ಥಿತಿಯ ಕೈಗೊಂಬೆಯಾಗಿ ಪರಿವರ್ತಿತಳಾದ ಕೈಕೇಯಿಯು ನಿರ್ದೋಷಿಯಾದವಳು — ಎನ್ನುವುದನ್ನು ಕವಿ ಸಹಜವಾಗಿ ಚಿತ್ರಿಸಿದ್ದಾರೆ.

ಶ್ರೀರಾಮನ ಮಾನವೀಯ ಮೌಲ್ಯಗಳು :- "ಶ್ರೀರಾಮನು ಒಬ್ಬ ಅವತಾರ ಪುರುಷ. ಜಗತ್ತಿನ ಕಾರ್ಯಕಲಾಪಗಳೆಲ್ಲವೂ ಅವನ ಇಚ್ಛಾಮಾತ್ರದಿಂದಲೇ ನಡೆಯುತ್ತವೆ" — ಎಂಬಂತಹ ನಂಬಿಕೆ ಪರಂಪರೆಯಿಂದ ಬೆಳೆದು ಬಂದಿದೆ. ಕವಿ ಗುಪ್ತರ ಚಿತ್ರ ಬೇರೆ. ಇಲ್ಲಿ ಶ್ರೀರಾಮ, ಮೊದಲು ಮಾನವ, ಆಮೇಲೆ ದೇವ. ಇಲ್ಲಿ ಅವನು ಜನ್ಮಾರಂಭದಿಂದಲೇ ದೇವನಾಗುವುದಿಲ್ಲ. ತನ್ನ ಮಾನವಸಹಜ ಸತ್ಪ್ರವೃತ್ತಿಯಿಂದ ದೈವತ್ವಕ್ಕೆ ಹೋಗುತ್ತಾನೆ. "ಭೂಲೋಕದಲ್ಲಿ ನವ ದಿವ್ಯತೆಯನ್ನು ಬೆಳಗಲು, ನರರಿಗೆ ನಾರಾಯಣತ್ವವನ್ನು ಕೊಡಿಸಲು ಇವನು ಬಂದನು. ಇವನು ಸ್ವರ್ಗದ ಸಂದೇಶವನ್ನು ಬೀರಲು ಬರಲಿಲ್ಲ, ಭೂಮಿಯನ್ನು ಸ್ವರ್ಗವನ್ನಾಗಿಸಲು ಬಂದನು". "ರಾಮನೇ, ನೀನು ಮಾನವ; ಈಶ್ವರನಲ್ಲ" ಎಂದು ಮುಂತಾಗಿ ತಮ್ಮ ಖಚಿತ ಅಭಿಪ್ರಾಯವನ್ನು ಮೈಥಿಲೀ ಶರಣಗುಪ್ತರು ವ್ಯಕ್ತಪಡಿಸಿದ್ದಾರೆ.

ಎಂತಹ ವಿಪತ್ಕಾರಕ ಪರಿಸ್ಥಿತಿ ಬಂದರೂ ಶ್ರೀರಾಮ ಹಿಂಜರಿಯುವುದಿಲ್ಲ. ತನಗೆ ಅಹಿತವನ್ನುಂಟುಮಾಡಿದ ಕೈಕೇಯಿಯ ವಿಷಯದಲ್ಲಿಯೂ ಇವನು ನೈಜವಾದ ಮಾತೃಭಕ್ತಿಯನ್ನೇ ವ್ಯಕ್ತಗೊಳಿಸುತ್ತಾನೆ; ಅವಳನ್ನು ಗೌರವಿಸುತ್ತಾನೆ ಮಾತಾಪಿತೃಗಳ ಆಜ್ಞಾಪಾಲಕನಾಗಿ ತಮ್ಮಂದಿರ ಪ್ರೇಮಪಾತ್ರ ಅಣ್ಣನಾಗಿ, ಆದರ್ಶ ಪತಿಯಾಗಿ, ಜನಹಿತೈಷಿಯಾಗಿ, ಜಗತ್ತನ್ನು ಸಂತೋಷಮಯವನ್ನಾಗಿಸುವ ಪ್ರಯತ್ನಶೀಲ ವ್ಯಕ್ತಿಯಾಗಿ, ತನ್ನ ಆದರ್ಶಗಳಿಂದ ದೇವತ್ವವನ್ನು ಪಡೆದ ಅಸಾಧಾರಣ ಮಾನವನಾಗಿ — ಇಲ್ಲಿ ಶ್ರೀರಾಮ ಚಿತ್ರಿತನಾಗಿದ್ದಾನೆ

ಸಂಜೀವಿನಿ ಮೂಲಿಕೆ ಪ್ರಸಂಗ :- ವಾಲ್ಮೀಕಿ ರಾಮಾಯಣವನ್ನು ಅನುಸರಿಸಿ ಬರೆದ ಪರಂಪರಾಗತ ರಾಮಾಯಣಗಳಲ್ಲಿ, ಸಂಜೀವಿನಿಯನ್ನು ಹನುಮಂತನು ಹಿಮಾಲಯದಿಂದ ತಂದಂತೆ ಹೇಳಿದ್ದಾರೆ ಆದರೆ ಗುಪ್ತರು ಇದನ್ನು ಮಾರ್ಪಡಿಸಿದ್ದಾರೆ. ಒಬ್ಬ ಯೋಗಿಯು ಇದನ್ನು ಭರತನಿಗೆ


*Statement about ownership and other particulars about*

**SAPTHAGIRI**
**(MONTHLY)**
FORM IV
(*See Rule* 8)

| | | |
|---|---|---|
| 1 | Place of publication | TIRUPATI |
| 2 | Periodicity of its publication | Monthly |
| 3 | Honorary Editor | Sri Ch. Venkatapathi Raju, I.A.S Executive Officer, T.T.D |
| 4 | Printer's Name<br>Whether citizen of India<br>Address | Sri M. Vijayakumar Reddy, L.P.T.,<br>Yes<br>Manager, T.T.D. Printing Press, Tirupati. |
| 5 | Editor & Publisher's Name<br>Whether citizen of India<br>Address | K. Subba Rao, M.A.,<br>Yes<br>Editor, Sapthagiri, T.T.D Journal, Tirupati. |
| 6 | Names and addresses of individuals who own the Newspaper and partners or shareholders holding more than one per cent of the total capital. | Board of Trustees represented by the Executive Officer on behalf of T T D., Tirupati. |

*I, K. Subba Rao, hereby declare that the particulars given above are true to the best of my knowledge and belief.*

TIRUPATI,
*Date* : 29-2-1988.

(*Sd.*) **K. SUBBA RAO,**
*Signature of the Publisher.*

ುದು ಕೊಡುತ್ತಾನೆ. ಇದು ಭರತನ ಬಳಿ ರುತ್ತದೆ. ಲಂಕೆಯಿಂದ, ಹನುಮಂತನು, ಂಜೀವಿನಿಯನ್ನು ತರಲು ಹೊಂರಡುತ್ತಾನೆ ಯೋಧ್ಯೆಯ ಮೇಲೆ, ಇವನು, ಹಾರಿ ಹೋಗು ರುವಾಗ, ಭರತನು, ಬಾಣದಿಂದ ಇವನನ್ನು ಹೊಡೆಯುತ್ತಾನೆ. ನೋವನ್ನು ತಡೆಯಲಾರದೆ ನುಮಂತನು ಭೂಮಿಗೆ ಇಳಿಯುತ್ತಾನೆ; ಮತ್ತು ೂರ್ಛಿತನಾಗುತ್ತಾನೆ ಆಗ ಭರತನು ತನ್ನ ದ್ದ ಸಂಜೀವಿನಿಯನ್ನು ಪ್ರಯೋಗಿಸುತ್ತಾನೆ. ನುಮಂತನು ಎಚ್ಚರಗೊಳ್ಳುತ್ತಾನೆ. ಆಗ ವನು, ಖರದೂಷಣರ ವಧೆಯ ನಂತರ ಶೂರ್ಪ ಖಿಯು ರಾವಣನಲ್ಲಿ ರಾಮಲಕ್ಷ್ಮಣರ ಮೇಲೆ ೂರು ಹೇಳುವುದು, ಸೀತಾಪಹರಣ, ಸುಗ್ರೀವ ಖ್ಯ, ರಾಮರಾವಣರ ಯುದ್ಧ, ಲಕ್ಷ್ಮಣನ ೂರ್ಛೆ–ಇಷ್ಟು ಕಥಾಭಾಗವನ್ನು ಭರತಾದಿ ಳಿಗೆ ತಿಳಿಸಿ, ಸಂಜೀವಿನಿಯೊಡನೆ ಲಂಕೆಗೆ ೋಗುತ್ತಾನೆ.

ವಶಿಷ್ಠರು ಯೋಗದೃಷ್ಟಿಯಿಂದ ಲಂಕೆಯಲ್ಲಿ ಡೆಯುತ್ತಿರುವ ಘಟನೆಗಳನ್ನು ತೋರಿಸ ವುದು:– ಾಮನ ವನವಾಸದ ಅವಧಿಯಲ್ಲಿ ಅಯೋಧ್ಯೆಯ ನತೆ, ಕೌಸಲ್ಯಾದಿ ರಾಜಮಾತೆಯರು ಮತ್ತು ರತ ಶತ್ರುಘ್ನಾದಿಗಳು ರಾಮನ ವಿರಹ ಚಿಂತೆ ಲ್ಲಿಯೇ ಮುಳುಗಿ ತಮ್ಮ ಎಲ್ಲ ಕರ್ತವ್ಯಗಳನ್ನೂ ೇಡಿತರಲಿಲ್ಲ; ಅವರು ಸದಾ ಜಾಗ್ರತರಾಗಿಯೇ ರುತ್ತಿದ್ದರು–ಎಂಬುದನ್ನು ಹೇಳಲು ಶ್ರೀ ಗುಪ್ತರು ದೆಹಿಂದು ಪ್ರಸಂಗವನ್ನು ಕಲ್ಪಿಸಿದ್ದಾರೆ. ಲಕ್ಷ್ಮ ಣನು ಮೂರ್ಛಿತನಾಗಿರುವ ವಿಷಯ, ರಾಮ ಾವಣರಿಗೆ ಯುದ್ಧವಾಗುತ್ತಿರುವ ವಿಷಯ ಹನು ಂತನಿಂದ ಭರತಾದಿಗಳಿಗೆ ತಿಳಿಯುತ್ತದೆ. ಕ್ಷಣವೇ ಕ್ಷತ್ರಿಯವೀರರಾದ ಇವರಲ್ಲಿಯೂ ರಕ್ತ ುಸಿಯಾಗುತ್ತದೆ. ಭರತನು, ಯುದ್ಧಕ್ಕೆ ಸಿದ್ಧ ಾಗಿರುವಂತೆ ಜನತೆಗೆ ಕರೆ ಕೊಡುತ್ತಾನೆ. ರಾಜ ರಿವಾರದಲ್ಲಿಯೂ ಯುದ್ಧದ ಕಾವು ಏರುತ್ತದೆ. ತ್ರುಘ್ನನೂ ಯುದ್ಧ ಸಿದ್ಧತೆಯ ಭರದಲ್ಲಿರು ್ತಾನೆ. ಹೀಗೆ ಅಯೋಧ್ಯೆಗೆ ಅಯೋಧ್ಯೆಯೇ ುದ್ಧೋತ್ಸಾಹದಿಂದ ತುಂಬಿಹೋಗುತ್ತದೆ. ುದು ವಶಿಷ್ಠರಿಗೆ ತಿಳಿಯುತ್ತದೆ. ಅವರು ಬಂದು, ನರಿಗೆ, ತಮ್ಮ ಯೋಗಶಕ್ತಿಯ ಮೂಲಕ, ಂಕೆಯಲ್ಲಿ ನಡೆಯುತ್ತಿರುವ ಎಲ್ಲ ದೃಶ್ಯಗಳನ್ನೂ ೋರಿಸುತ್ತಾರೆ. ಲಕ್ಷ್ಮಣ ಮೂರ್ಛೆಯಿಂದ ಏಳುವುದು; ರಾಮನ ಮೂಲಕ ರಾವಣನ ಂಹಾರ–ಈ ದೃಶ್ಯವನ್ನು, ಜನ ನೋಡಿ ಸಮಾ ಾನಪಟ್ಟುಕೊಳ್ಳುತ್ತಾರೆ.

ಪುಷ್ಪವಾಟಿಕಾ ಪ್ರಸಂಗ:– ಮಿಥಿಲಾನಗರದ ಕ್ಕದಲ್ಲಿ ಕಮಲಾನದಿ ಹರಿಯುತ್ತಿರುತ್ತದೆ. ಅದರ ದಡದಲ್ಲಿ ರಾಜೋದ್ಯಾನ, ಸೀತಾಸ್ವಯಂವರದ ಹಿಂದಿನ ದಿನವೇ ವಿಶ್ವಾಮಿತ್ರರು ರಾಮಲಕ್ಷ್ಮಣ ರೊಡನೆ ಮಿಥಿಲೆಗೆ ಬಂದಿದ್ದಾರೆ. ಶ್ರೀರಾಮಲಕ್ಷ್ಮ ಣರು ಜನಕನ ರಾಜೋದ್ಯಾನಕ್ಕೆ ವಿಶ್ವಾಮಿತ್ರರ ಪೂಜೆಗಾಗಿ ಹೂವುಗಳನ್ನು ತರಲು ಬಂದಿದ್ದಾರೆ. ಆ ಸಮಯದಲ್ಲಿ ಸೀತಾ–ಊರ್ಮಿಳೆಯರೂ ಆ ಉದ್ಯಾನದಲ್ಲಿದ್ದ ಗಿರಿಜೆಯ ದೇವಾಲಯಕ್ಕೆ ಪೂಜೆ ಗೆಂದು ಬರುತ್ತಾರೆ ಅಲ್ಲಿ, ಅವರು, ಶ್ರೀರಾಮ ಲಕ್ಷ್ಮಣರನ್ನು ಕಂಡು ಆಕರ್ಷಿತರಾಗುತ್ತಾರೆ. ಇದರ ಪರಿಣಾಮವಾಗಿ ಊರ್ಮಿಳೆಗೆ ಆ ದಿನ ರಾತ್ರಿ ವಿರಹದ ಪ್ರಥಮಾನುಭವವಾಗುತ್ತದೆ.

ಹೀಗೆ ಮೈಥಿಲಿ ಶರಣ ಗುಪ್ತರು, ಸಾಕೇತ ಕಾವ್ಯಕ್ಕೆ ಹೊಸ ಘಟನೆಗಳನ್ನು ಕಲ್ಪಿಸುವುದರ ಮೂಲಕ ಶ್ರೀರಾಮನ ಮಹಾನ್ ವ್ಯಕ್ತಿತ್ವಕ್ಕೆ, ರಾಮಾಯಣದ ಕಥಾನಕಕ್ಕೆ ಹೊಸ ರೂಪವನ್ನು ಕೊಟ್ಟಿದ್ದಾರೆ.

ಸಾಕೇತ–ಹೆಸರು:– ಶ್ರೀ ಗುಪ್ತರು ಮಹಾನ್ ಕಾವ್ಯವನ್ನು "ಸಾಕೇತ" ಎಂದು ಏಕೆ ಹೆಸ ರಿಟ್ಟರು? ಇದು ಸಹಜವಾದ ಪ್ರಶ್ನೆ. ಈ ಪ್ರಶ್ನೆಗೆ ಕವಿಗಳೇ ಉತ್ತರ ನೀಡಿದ್ದಾರೆ.

> ದೇಖ್ ಲೋ! ಸಾಕೇತ ನಗರೀ ಹೈ ಯಹೀ
> ಸ್ವರ್ಗ ಸೇ ಮಿಲನೇ ಗಗನ್ ಮೇಂ ಜಾ ರಹೀ
> ಜೋ ಸುಸಂಪತ್ ಕೇ ನಿದರ್ಶನರೂಪ್ ಹೈಂ
> ರಾಘವೋಂ ಕೇ ಇಂದ್ರಮೈತ್ರೀ ಕೇ ಬಡೇ
> ವೇದಿಯೋಂ ಕೇ ಸಾಥ್ ಸಾಕ್ಷೀ ಸೇ ಬಡೇ
> ಮೂರ್ತಿಮಯ, ವಿವರಣ ಸಮೇತ್,
> ಜುಡೇ ಜುಡೇ
> ಐತಿಹಾಸಿಕ ವೃತ್ ಜಿನ್ ಮೇಂ ಹೈಂ ಖುದೇ
> ಯತ್ರ ತತ್ರ ವಿಶಾಲ ಕೀರ್ತಿಸ್ತಂಭ್ ಹೈಂ
> ದೂರ್ ಕರ್ ತೇ ದಾನವೋಂ ಕಾ ದಂಭ್ ಹೈಂ

"ಈ ನಗರವನ್ನು ಕಂಡ ತಕ್ಷಣ ಕೇವಲ ಈಗಿನ ರಾಜನಾದ ದಶರಥನ ನೆನಪು ಮತ್ತು ಈಗಿನ ಆ ನಗರದ ಸೌಂದರ್ಯ ಅಷ್ಟೇ ನಮ್ಮ ಮನ ಸ್ಸನ್ನು ಆಕರ್ಷಿಸುವುದಿಲ್ಲ. ಇದರ ದರ್ಶನದಿಂದ ಈ ನಗರದ ಅತ್ಯಂತ ಪ್ರಾಚೀನ ಇತಿಹಾಸವೂ ಇಲ್ಲಿಯ ರಾಜವಂಶದ ಪ್ರೋಜ್ಜ್ವಲ ಶೌರ್ಯ ವೀರ್ಯಗಳ ಪರಂಪರಾಗತ ಇತಿಹಾಸವೂ ನೆನಪಿಗೆ ಬರುತ್ತದೆ. ಈ ವಂಶದ ರಾಜರು ವೀರಕ್ಷತ್ರಿ ಯರೂ ಆಗಿದ್ದಂತೆ ಮಹಾಯಾಜ್ಞಿಕರೂ ಆಗಿದ್ದರು. ಅವರು ಮಾಡಿದ ಅನೇಕ ಯಜ್ಞಗಳ ಯೂಪಸ್ತಂ ಭಗಳು ಈಗಲೂ ಈ ನಗರದಲ್ಲಿ ಕಾಣಬರುತ್ತವೆ. ಈ ರಾಜರುಗಳು ಭೂಲೋಕದಲ್ಲಿ ವೀರಕ್ಷತ್ರಿಯ ರಾಗಿದ್ದು, ದೇವಲೋಕದ ಇಂದ್ರನ ಸ್ನೇಹಿತರೂ ಆಗಿದ್ದರು. ಇಂದ್ರನ ಅನೇಕ ಯುದ್ಧಗಳಲ್ಲಿ ಭಾಗ ವಹಿಸಿ, ಅವನಿಗೆ ಜಯವನ್ನು ದೊರಕಿಸಿ ಕೊಟ್ಟಿದ್ದರು. ಆ ಇಂದ್ರಸ್ನೇಹ ಇಂದಿಗೂ ಮುಂಪುವರಿದಿದೆ. ಅವರ ಜಯಗಳ ನೆನಪಿಗಾಗಿ ಸ್ಥಾಪಿಸಿದ ಸ್ಮಾರಕಗಳು ಇಂದಿಗೂ ಆ ನಗರದಲ್ಲಿ"

'ಸಾಕೇತ' ಶಬ್ದ ಈ ಎಲ್ಲವನ್ನೂ ಅಭಿವ್ಯಕ್ತ ಗೊಳಿಸುತ್ತದೆ. 'ಸಾಕೇತ' ಶಬ್ದದ ಅಥವಾ 'ಸಾಕೇತ ನಗರಿ'ಯ ಪ್ರಾಚೀನತೆಯ ಬಗ್ಗೆ ಒಂದೆರಡು ಮಾತನು ಇಲ್ಲಿ ಹೇಳುವುದು ಸೂಕ್ತ.

ಇದು 'ಅಯೋಧ್ಯಾ' ಶಬ್ದಕ್ಕಿಂತ ಪ್ರಾಚೀನವೂ ಹೌದು. ಸಾಕೇತನಗರಿ, ಅಯೋಧ್ಯಾನಗರಿಗಿಂತ ಅನೇಕ ವರ್ಷಗಳ ಹಿಂದೆಯೇ ಇತ್ತು. ಋಗ್ವೇದದ ಕೆಲವು ಮಂಡಲಗಳಲ್ಲಿ 'ಸಾಕೇತ' ಶಬ್ದದ ಉಲ್ಲೇ ಖವಿದೆ–ಎಂದು ಆಪ್ಟೆಯವರು ತಮ್ಮ ಶಬ್ದಕೋಶ ದಲ್ಲಿ (ಸಂಸ್ಕೃತ–ಇಂಗ್ಲೀಷ್ ಡಿಕ್ಷನರಿ–ಪುಟ 595) ಹೇಳಿದ್ದಾರೆ. ವಾಲ್ಮೀಕಿಗಳು ಸಹ ರಾಮಾಯಣದ ಬಾಲಕಾಂಡದಲ್ಲಿ 'ಅಯೋಧ್ಯಾ' ಎಂಬ ಹೆಸರು ಇತ್ತೀಚಿನದು ಎಂದು ಹೇಳಿದ್ದಾರೆ. ಈ ಮೊದಲು ಮೊದಲು ಈ ನಗರವನ್ನು 'ಸತ್ಯನಗರ' ಎಂದು ವ್ಯವಹರಿಸುತ್ತಿದ್ದರು–ಎಂದೂ, ಅನಂತರ ಇದನ್ನು 'ಯುದ್ಧದಲ್ಲಿ ಗೆದ್ದು ಜಯಿಸಲಸಾಧ್ಯರಾದಂತಹ ರಾಜರುಗಳು ಆಳಿದ್ದರಿಂದ ಇದನ್ನು 'ಅಯೋಧ್ಯಾ' (ಯುದ್ಧಮಾಡಿ ಜಯಿಸಲಸಾಧ್ಯವಾದದ್ದು) ಎಂದು ನಾಮಕರಣ ಮಾಡಿದರೆಂದೂ ವಾಲ್ಮೀಕಿ ಹೇಳಿ ದ್ದಾರೆ. (ಬಾಲಕಾಂಡ–ಸರ್ಗ ೬–ಶ್ಲೋಕ ೨೬–೨೮) ಅನಂತರ ಎಲ್ಲ ವ್ಯವಹಾರಗಳಲ್ಲಿಯೂ ಮತ್ತು ಮಹಾಭಾರತದಲ್ಲಿಯೂ 'ಅಯೋಧ್ಯಾ' ಎಂಬ ಹೆಸರೇ ಪ್ರಚುರವಾಗಿರುವುದು ಕಂಡು ಬರುತ್ತದೆ ಸಂಸ್ಕೃತ ನಾಟಕಕಾರರಾದ ಕಾಳಿ ದಾಸ, ಭಾಸ, ಭವಭೂತಿ – ಮುಂತಾದವರು ತಮ್ಮ ಕಾವ್ಯಗಳಲ್ಲಿ 'ಸಾಕೇತ' ಎಂದು, ಅಯೋಧ್ಯಾನಗರವನ್ನು ಕರೆದಿದ್ದಾರೆ. ಜೊತೆಗೆ 'ಅಯೋಧ್ಯಾ' ಎಂಬ ಹೆಸರನ್ನೂ ಬಳಸಿದ್ದಾರೆ. ಕನ್ನಡದಲ್ಲಿಯೂ ಸಹ ಆದಿಪುರಾಣ (6–107 ವ) ಪಂಪರಾಮಾಯಣ (1–100) ಆನಂದರಾಮಾ ಯಣ (17–1) ತೊರವೆ ರಾಮಾಯಣ (1–7–18) ವೆಂಕಾಮಾತ್ಯ ರಾಮಾಯಣ (1-4–2, 5,6 7) ಭರತೇಶ ವೈಭವ (20–18) ಜೈನ ರಾಮಾಯಣ (?–29) ಶ್ರೀರಾಮಾಯಣ ದರ್ಶನಂ (ಪುಟ 7) ಮುಂತಾದ ಕಾವ್ಯಗಳಲ್ಲಿ 'ಸಾಕೇತ' ಪದದ ಉಲ್ಲೇಖವಿದೆ. ಹಿಂದೀ ಭಾಷೆ ಯಲ್ಲಿ ಶ್ರೇಷ್ಠ ವಿಮರ್ಶಕರೆಂದು ಹೆಸರು ಪಡೆದ ಶ್ರೀ ನಂದದುಲಾರೆ ವಾಜಪೇಯಿಯವರು 'ಸಾಕೇತ' ನಗರದ ವಿಷಯದಲ್ಲಿ ವಿಮರ್ಶಿಸುತ್ತಾ

(32ನೇ ಪುಟ ನೋಡಿ)

ಓಂ ಶ್ರೀ ಮಾತ್ರೇ ನಮಃ

ಫೋನ್ :
ಕಛೇರಿ 472031
ಮನೆ : 841254

# ನವಶಕ್ತಿನಿಲಯದವರಿಂದ ಭಕ್ತರಿಗೆ ವಿಶಿಷ್ಟ ಕೊಡುಗೆ

ಜಗದ್ಗುರು ಶ್ರೀ ಕಂಚಿಕಾಮಕೋಟಿ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳ, ಶ್ರೀ ಕಿರ ಮುರುಗ ಕೃಪಾನಂದ ವಾರಿಯರ್ ಮತ್ತಿತರ ಸಂತರ ಆಶಿಸ್ಸುಗಳನ್ನು ಹೊಂದಿ ದಿವ್ಯ ಯಂತ್ರಗಳನ್ನು ತಯಾರ ಮಾಡುವ ಸಂಸ್ಥೆ.

1 ಶ್ರೀ ಮಹಾಮೇರು ಪಂಚಲೋಹ ಯಂತ್ರ
16×16 cm ಹಾಗೂ 10×10cm (ವೈಯಕ್ತಿಕ)

2. ಶ್ರೀ ಮಹಾಮೇರು ಪಂಚಲೋಹ ಯಂತ್ರ
6×6 cm ರೂ. 550–00

3. ಶ್ರೀ ಮಹಾಮೇರು ಪಂಚಲೋಹ
4 ×4 cm ರೂ. 350–00

4. ಶ್ರೀ ಮಹಾ ಗಣಪತಿ ಯಂತ್ರ 8×8 cm ರೂ. 130–00

5. ಶ್ರೀಚಕ್ರ ಬೀಜಾಕ್ಷರದೊಡನೆ
4 ×42 cm ಹಾಗೂ 32×32 cm (ವೈಯಕ್ತಿಕ)

6. ಶ್ರೀ ಮಹಾಲಕ್ಷ್ಮಿ ಮಹಾಯಂತ್ರ
24×24 cm ರೂ. 1150–00

7. ಶ್ರೀ ಮಹಾಸುದರ್ಶನ ಯಂತ್ರ
16×16 cm ರೂ. 600–00

8. ಶ್ರೀಚಕ್ರಯಂತ್ರ 8×8 cm ರೂ. 130–00

9. ಚಿದಂಬರ ಚಕ್ರ 8×8 cm ರೂ. 130–00

10. ಸುಬ್ರಹ್ಮಣ್ಯ ಯಂತ್ರ 8×8 cm ರೂ. 130–00

11. ಸುದರ್ಶನ ಯಂತ್ರ 8×8 cm ರೂ. 130–00

12. ನವಗ್ರಹ ಯಂತ್ರ 8×8 cm ರೂ. 130–00

13. ಸರ್ವಜನ ಧನ ಆಕರ್ಷಣ, ಶ್ರೀ ಸಾಮ್ರಾಜ್ಯಲಕ್ಷ್ಮಿ
ಶ್ರೀ ಮಹಾಸುದರ್ಶನಂ 16×48 cm ರೂ. 1600–00

14. ಸರ್ವಜನ ಧನ ಆಕರ್ಷಣ ಶ್ರೀ ಸಾಮ್ರಾಜ್ಯಲಕ್ಷ್ಮಿ
ಶ್ರೀ ಮಹಾಸುದರ್ಶನ 8×24 cm ರೂ. 450–00

15. ಶೂಲಿನಿ, ಶರಭೇಶ್ವರ, ಪ್ರತಿಂಗಾರ 16×48 cm
ರೂ. 1600–00

16: ದಶಮಹಾಸಿಧಿಗಳು ಯಂತ್ರಗಳು (ವೈಯಕ್ತಿಕ)

17. ದೃಷ್ಟಿನಿವೃತ್ತಿ ಹಾಗೂ ಸುದರ್ಶನ ಪದಕ ರೂ. 65–00

18. ಕಾಮಾಕ್ಷಿ ಶ್ರೀಚಕ್ರ ಪದಕ ರೂ. 65–00

19. ಕಾಮಾಕ್ಷಿ, ಧನ ಆಕರ್ಷಣ ಪದಕ ರೂ. 65–00

20. ಕಾಮಾಕ್ಷಿ, ಮಾಂಗಲ್ಯಭಾಗ್ಯ ಪದಕ ರೂ. 65–00

21. ಶ್ರೀ ಮುರುಗನ್ ಆಕರ್ಷಣ ಪದಕ ರೂ. 55–00

22. ವಿವಾಹಪ್ರಾಪ್ತಿ ಪದಕ ರೂ. 65–00

23. ಶ್ರೀ ಅಯ್ಯಪ್ಪನ್ ಪದಕ (ಸನ್ನಿಧಿಯೊಡನೆ) ರೂ. 65–00

24. ಶ್ರೀಚಕ್ರಂ ಲಕ್ಷ್ಮೀ ಬೀಜದೊಡನೆ ರೂ. 65–00

25. ಶ್ರೀದೇವಿ ಕರುಮಾರಿ ಅಮ್ಮನ್ ಹಿತ್ತಾಳೆ ಪದಕ ರೂ. 65–00

26. ನವಗ್ರಹ ಪದಕ ಬೊಂಬೆಗಳು ಯಂತ್ರಗಳೊಡನೆ ರೂ. 65–00

27. ದೃಷ್ಟಿನಿವಾರಕ ಯಂತ್ರ ಫ್ರೇಂನೊಡನೆ ರೂ. 65–00

28. ವಿದ್ಯುದ್ದೀಕ್ಷಿತ ಹಿತ್ತಾಳೆ ಕಡಗ
12 ರಾಶಿಗಳಿಗೆ–ಒಂದೊಂದು ರೂ. 25–00

29. ತುಲಸೀ ಮಾಲೆ 54 ಮಣಿಗಳು ರಜತ ಕವಚದೊಡನೆ
ರೂ. 125–00

30. ರುದ್ರಾಕ್ಷಿಮಾಲೆ 54 ಮಣಿಗಳು ರಜತಕವಚದೊಡನೆ
ರೂ. 300-00

31. ಸಹಜ ಕಮಲಮಾಲೆ 54 ಮಣಿಗಳು " ರೂ. 180–00

32. ರಸಲಿಂಗ, ಸ್ಫಟಿಕಲಿಂಗ, ಮರಕತಲಿಂಗ
ಬಾಣಲಿಂಗ, ಸಾಲಿಗ್ರಾಮ, ಪಂಚಾಯತನ
ಸೆಟ್, ವಲಂಪುರಿ ಶಂಖ, ಪಂಚಲೋಹ
ವಿಗ್ರಹ, ಪಾದರಸಮಣಿ ಪಾದರಸ ವಿನಾಯಕ
ಸಹ ದೊರೆಯುವುವು ಬೆಲೆ ವ್ಯಕ್ತಿಗತ.

ಇವಲ್ಲದೆ 108 ಇತರ ಯಂತ್ರಗಳೂ ನಮ್ಮಲ್ಲಿ ದೊರೆಯುವುವು. ದೇವಾಲಯಗಳಿಗೆ, ಗೃಹಪೂಜಾಮಂದಿರಗಳಿಗೆ, ಗ್ರಾಮದೇವತೆಗಳಿಗೆ ಅಗತ್ಯವಾದ ಯಂತ್ರಗಳು ದೊರೆಯುತ್ತವೆ. ಒಂದೊಂದು ಯಂತ್ರವೂ ರೂ. 150–00 ವಿವರಗಳಿಗಾಗಿ 50 ಪೈಸೆ ಸ್ಟಾಂಪ್ ಹಚ್ಚಿದ ಕವರನ್ನು ಕೆಳಗಣ ವಿಳಾಸಕ್ಕೆ ಕಳುಹಿಸಿ. ಕ್ಯಾಟಲಾಗ್ ಉಚಿತ, ವಿದೇಶಿ ಅಭ್ಯರ್ಥನೆಗಳನ್ನು 25% ಹೆಚ್ಚಿನ ಬೆಲೆಯೊಡನೆ ಅಂಗೀಕರಿಸಲಾಗುವುದು.

**ಉತ್ತರ ಪ್ರತ್ಯುತ್ತರಗಳು ಆಂಗ್ಲಭಾಷೆಯಲ್ಲಿ ಮಾತ್ರವೇ ನಡೆಯುವುವು.**

**ವಿಶ್ವಕರ್ಮಜ್ಞ ಶ್ರೀ ವಿದ್ಯೋಪಾಸಕ**
**ಸ್ವಾಮೀಜಿ ಶ್ರೀ ಎಸ್. ಮುರುಗಭೂಷಣಂ,**
ಅಧ್ಯಕ್ಷರು, ನವಶಕ್ತಿ ನಿಲಯ, 153, ಲಾಯಿಡ್ಸ್ ರೋಡ್,
(ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಎದುರು)
ಗೋಪಾಲಪುರಂ, ಮದ್ರಾಸು 600086

'ಲೋಕಾಃ ಸಮಸ್ತಾಃ ಸುಖಿನೋಭವಂತು'

# ಆಧ್ಯಾತ್ಮ ಶ್ರೀರಾಮಸ್ತೋತ್ರಂ

ಅಸ್ಯಶ್ರೀ ಸಹಸ್ರಾರಪದ್ಮಸ್ಥ ಶ್ರೀರಾಮಸ್ತೋತ್ರ
ಮಹಾಮಂತ್ರಸ್ಯ ವೈಶ್ವಾಮಿತ್ರೋ ಗುರುಪಾದಃಕವಿಃ;
ತಿಸ್ಥಿಣ್ಯಾಂ ಧ್ಯಾನಂ;
ಅನುಷ್ಟುಪ್ ಛಂದಃ; ಸಲೌಕಿಕಪರಮಪುರುಷಾರ್ಥಪ್ರದಃ
ಶ್ರೀರಾಮೋ ದೇವತಾ;
ಶ್ರೀಃ ಸೀತಾ ಶಕ್ತಿಃ; ರಂ ಕೀಲಕಮ್; ಶ್ರೀಂ ಹ್ರೀಂ ಕ್ಲೀಂ
ಬೀಜಮ್; ಓಂ
ಪರಮಹಂಸ ಶ್ರೀರಾಮಪ್ರೀತ್ಯರ್ಥಂ ಶ್ರೀರಾಮಸ್ತೋತ್ರ ಜಪೇ
ವಿನಿಯೋಗಃ ।

ನ್ಯಾಸಃ–

ಓಂ ರಾಂ ಸುಮನೋಲಕ್ಷ್ಮಣ ಗುರವೇ ನಮಃ । ಅಂಗುಷ್ಠಾಭ್ಯಾಂ
ಭ್ಯಾಂ ನಮಃ । ಹೃದಯಾಯ ನಮಃ । ಓಂ ರೀಂ ಭರತಹಿತ
ಪಾದಾಯ ನಮಃ । ತರ್ಜನೀಭ್ಯಾಂ ನಮಃ । ಶಿರಸೇ ಸ್ವಾಹಾ । ಓಂ
ಂ ನಿಜಶತ್ರುಘ್ನ ಮುದಿತಾಯನಮಃ । ಮಧ್ಯಮಾಭ್ಯಾಂ ನಮಃ ।
ರಾಯೈ ವಷಟ್ । ಓಂ ಪ್ರೈಂ ಸೂರ್ಯಸುಖದಾಯನಮಃ । ಅನಾ
ಕಾಭ್ಯಾಂ ನಮಃ । ಕವಚಾಯ ಹುಮ್ । ಓಂ ರೌಂ ಹನೂಮತ್ಸ್ತು
ಣಾಯ ನಮಃ । ಕನಿಷ್ಠಿಕಾಭ್ಯಾಂ ನಮಃ ।ನೇತ್ರತ್ರಯಾಯ ವೌಷಟ್ ।
ಂ ರಃ ಸಹಸ್ರಾರಪದ್ಮಸ್ಥ ಶಿವಾಯನಮಃ । ಕರತಲಕರಪೃಷ್ಠಾಭ್ಯಾಂ
ಮಃ । ಅಸ್ತ್ರಾಯ ಫಟ್ । ಓಂ ಭೂರ್ಭುವಸ್ಸುವಃ । ಇತಿ ದಿಗ್ಬಂಧಃ॥

ಥ ಧ್ಯಾನಮ್–

ಸಹಸ್ರಾರೇ ಪದ್ಮೇ ಲಸತಿ ನಿಜಶತ್ರುಘ್ನ ಮುದಿತಃ
ಶಿವೋ ಯಃ ಸಂಪೃಕ್ತೈಃ ಪವನಸುತಮಾನ್ಯೋ ವಿತರಿತಾ ।
ಗುರುರ್ವೈ ಸೌಮಿತ್ರೇರ್ಭರತಹಿತಪಾದಃ ಸುಮನಸಃ
ಪರಾಧ್ಯಃ ಶ್ರೀರಾಮೋ ವಿಮಲಕಿರಣಃ ಸೂರ್ಯಸುಖದಃ ॥*

ನ್ನಡ ಅರ್ಥ :–

ಸಾವಿರದ ಎಸಳುಗಳ ಕಮಲದಲಿ ರಾಮ
ಶೋಭಿಸುತ್ತಿಹನೀತ ಸೀತೆ ಸಹಿತ ॥
ಹನುಮಮಾನಿತ ಶಿವನು ಸಂಪತ್ಪ್ರದಾತ
ಸೂರ್ಯಸುಖದಾತನಿವ ವಿಮಲಕಿರಣ ।
ಅತ್ಮ ಶತ್ರುಘ್ನನನು ನೋಡೀತ ಸಂತುಷ್ಟ,
ಅಣ್ಣನಿವ ಲಕ್ಷ್ಮಣಗೆ ದಿವ್ಯಮನದವಗೆ ॥

ಭರತನಿಗೆ ಹಿತವಾದ ಪಾದದಾತಾರ
ಸರ್ವಾತ್ಮ ಸುಖದಾತನಾರಾಧ್ಯ ಗುರುವು ॥ಆರಾಧ್ಯಗುರುವು॥

ಅಥ ಸ್ತೋತ್ರಂ (ಸಂಸ್ಕೃತ ಮತ್ತು ಕನ್ನಡಗಳಲ್ಲಿ)–

ಸ್ವಶಕ್ತ್ಯಾ ಸೀತಯಾ ಯುಕ್ತಃ ಶ್ರೀರಾಮೋ ಲೋಕದೀಪಕಃ ।
ರಾಜತೇ ಸ ಸಹಸ್ರಾರೇ ಪದ್ಮೇ ದೇವಃ ಸನಾತನಃ ॥ 1 ॥

ಸರ್ವಶಾಶ್ವತದೇವ ಸೀತೆಯೆಂದೆನಿಸಿರುವ
ನಿಜಶಕ್ತಿಯೊಡನಿರಲು ಆಗ ಶ್ರೀರಾಮ ।
ಶೋಭಿಸುತ್ತಿಹನೀತ ಲೋಕದೀಪಕನು
ಹತ್ತು ನೂರೆಸಳುಗಳ ಕಮಲಚಕ್ರದಲಿ ॥

ಸ್ಥಿತಿಕರ್ತಾಧಿಪೋ ವಿಷ್ಣುಃ ಪರಂಬ್ರಹ್ಮ ತ್ವಮರ್ಥತಃ ।
ಲಕ್ಷ್ಮೀಸ್ತತ್ತತ್ತ್ವರೂಪಾಸೌ ಸೀತಾ ರಾಮೇ ಸತಿ ತ್ವಯಿ ॥ 2 ॥

ಪರಬ್ರಹ್ಮ ಸ್ಥಿತಿಕರ್ತ್ರಧಿದೇವ ನೀನೇ
ಲಕ್ಷ್ಮಿಯೇ ತತ್ತ್ವ ಇದು ಸರ್ವಸತ್ಯ ।
ವಿಷ್ಣುವೆನಿಸಿದ ನೀನು ರಾಮನಾಗಿರುವೆ
ನೀ ರಾಮನಾದಾಗ ಲಕ್ಷ್ಮಿ ತಾ ಸೀತೆ ॥

ನಿರ್ಗುಣಬ್ರಹ್ಮ ರಾಮಸ್ತ್ವಂ ಸ್ವೇಚ್ಛಯಾ ಸಗುಣಸ್ತ್ವವ ।
ಆದಿಶಕ್ತ್ಯಾ ಶ್ರಿಯಾ ಯುಕ್ತಃ ಸೃಷ್ಟ್ಯಾದೀಷು ಚ ನಿಷ್ಠಿತಃ ॥ 3 ॥

ನಿರ್ಗುಣಬ್ರಹ್ಮ ನೀ ರಾಮನಾಗಿರುವೆ
ನಿನಿಚ್ಛೆಯಿಂದಲೇ ಸಗುಣನಾಗಿರುವೆ ।
ಆದಿಶಕ್ತಿಯೆ ಶ್ರಿಯು ಅವಳೊಡನೆ ನೀನು
ಸೃಷ್ಟ್ಯಾದಿ ಕಾರ್ಯದಲಿ ನಿತ್ಯತೊಡಗಿರುವೆ ॥

ಕೋಟಿಸೂರ್ಯಜಗದ್ದೇಹಃ ಸರ್ವಕಾರಣಪುರುಷ ।
ತ್ವಮೇಕಃ ಸವಿತಾ ದೇವೋ ಗಾಯತ್ರೀ ರಾಮ ಜಾನಕೀ ॥ ೪ ॥

ಕೋಟಿಗಟ್ಟಲೆ ಸೂರ್ಯರಿಂದ ಕೂಡಿದ ಲೋಕ
ನಿನ್ನದೇಹವು ಸರ್ವಕಾರಣಾತ್ಮಕನೆ ।
ಒಬ್ಬನೇ ಒಬ್ಬನಾ ಸವಿತೃದೇವನು ನೀನು
ಗಾಯತ್ರಿಯೇ ರಾಮ ಜಾನಕಿಯು ದಿಟವು

ಸರ್ವೇಷಾಂ ಸವಿತಾ ಸೂರ್ಯಃ ಸ ತ್ವಂ ತೇಜಸ್ತ್ವಮೇವ ತತ್ ।
ಸರ್ವಪ್ರಸವಶಕ್ತಿಸ್ತ್ವಂ ಬ್ರಹ್ಮಾದೇವ ಸಶಾರದಃ ॥ ೫ ॥

## ಶ್ರೀ ಗುರುಪಾದ ಹೆಗಡೆ

ಈ ಶ್ಲೋಕವನ್ನು 1983 ರಲ್ಲಿ ಮೈಸೂರಿನಲ್ಲಿ ನಡೆದ ದಸರಾ ಕವಿಸಮ್ಮೇಳನದಲ್ಲಿ ಪಠಿಸಲಾಗಿದೆ; ಎಲ್ಲರ ಮೆಚ್ಚುಗೆಯನ್ನೂ ಪಡೆದ ಈ ಶ್ಲೋಕವು ಇದರ ಕನ್ನಡ ಅನುವಾದ ಸಹಿತವಾಗಿ ದಸರಾ ಕಾವ್ಯಸಂಚಿಕೆಯಾದ "ಕಾವ್ಯದೀಪ" ದಲ್ಲಿ ಪ್ರಕಟಿಸಲ್ಪಟ್ಟಿತು.

ಈ ಧ್ಯಾನ ಶ್ಲೋಕವನ್ನು ಆಧರಿಸಿ ಮತ್ತು ಮುಂದಿನ ಸ್ತೋತ್ರದಲ್ಲಿಯ ವರ್ಣನೆಗೆ ಅನುಗುಣವಾಗಿ ಈ ಕವಿಯ ನಿರ್ದೇಶನದಂತೆ ಕರ್ನಾಟಕದ ಶಿವಮೊಗ್ಗ ಜಿಲ್ಲೆಯ ಸಾಗರ ಪಟ್ಟಣದ ಪ್ರಖ್ಯಾತ ಶಿಲ್ಪಿ ಶ್ರೀ ಕೆ.ಜಿ. ಶಾಂತಪ್ಪನವರು ಮತ್ತು ಮಕ್ಕಳು ನಿರ್ಮಿಸಿದ ಸೀತಾ ಸಹಿತನಾದ ರಾಮನ ಕಲ್ಲಿನ ಮೂರ್ತಿಯು ಇದೇ ಸಾಗರದಲ್ಲಿಯೇ ಪ್ರತಿಷ್ಠಾಪಿತವಾಗಲಿದೆ.

ಸರ್ವವನು ಪ್ರಸವಿಸುವ ಸೂರ್ಯನೂ ನೀನೇ
ಸರ್ವಪ್ರಸವಕಶಕ್ತಿ ನಿನ್ನ ತೇಜಸ್ಸು ।
ಈ ಅರ್ಥದಲಿ ನೀನು ಪ್ರಕಾಶನಾಗಿರುವೆ
ದೇವ ನೀ ಆನಂದದಾಯಕನಾಗಿರುವೆ ॥

ವರೇಣ್ಯಂ ಸವಿತುರ್ಭರ್ಗೋ ಜಗತ್ಸೃಷ್ಟಿಕಾರಕಃ ।
ಗಾಯತ್ರೀ ಸುವಿಜ್ಞಾತಂ ವಿಷ್ಣುಶಕ್ತಿರ್ಜಗತ್ಪ್ರಭವಮ್ ॥ ೬ ॥

ಎಲ್ಲವಕ್ಕೂ ಮಿಗಿಲು ಸವಿತೃತೇಜಸ್ಸು
ಜಗತ್ಸೃಷ್ಟಿಯುಮಿದರ ನಿಜಸ್ವಭಾವ ।
ಇದರಿಂದ ಗಾಯತ್ರಿಯೆಂಬ ಹೆಸರಿಹುದಕೆ
ನಿಜವ ತಿಳಿದರೆ ಅದುವೆ ಶ್ರೀ ವಿಷ್ಣುಶಕ್ತಿ ॥

ಮಹಾಸೂರ್ಯಸ್ಯ ಚೈತನ್ಯಾಃ ಸಂಖ್ಯಾತೀತಾಶ್ಚ ತೇ ಕರಾಃ ।
ಜೀವಾತ್ಮಾನೋ ಹಿ ರಾಮ ತ್ವಂ ಪರಮಾತ್ಮಾಸ್ಯತಃ ಪ್ರಭೋ ॥ ೭ ॥

ಮಹಾಸೂರ್ಯನು ನೀನು ಜಗದೇಕಮುಕುಟಮು
ಸಂಖ್ಯೆಗೆಟುಕದ ನಿನ್ನ ಕಿರಣಗಳು ಎಲ್ಲ ।
ಜೀವಾತ್ಮರಾಗಿಹವು ಇದು ದಿಟವು ರಾಮ
ಈ ಅರ್ಥದಲಿ ನೀನು ಪರಮಾತ್ಮ ಪ್ರಭುವೆ ॥

ಪೂಷನ್ ರಾಮ ಹರಸ್ತ್ವಂತು ಲಯಕರ್ತಾ ಯದಾತ್ಮನಿ ।
ಹಂಸಭಾವೇ ಸ್ಥಿತಾನ್ ರಶ್ಮೀನ್ ಕೃತಾರ್ಥಾಂಸ್ತ್ವೇ ಸಮೂಹಸೇ ॥

ಪೋಷಕನೆ ರಾಮನು; ಎಂದು ನಿನ್ನಲಿ ನೀನು
ಸಂಪೂರ್ಣಸಾರ್ಥಕತೆ ಪಡೆದುಕೊಂಡಿರುವ ।
ಹಂಸಗಳ ಭಾವದಸ್ಥಿರುವ ಕಿರಣಗಳನ್ನು
ಲೀನಗೊಳಿಸುವೆಯಾಗ ಲಯಕಾರಿ ಹರನು ॥

ನಾರಾಯಣೋಽಸಿ ರಾಮ ತ್ವಂ ಯತೋ ನಾರಂ ತವಾಯನಮ್ ।
ನಾರಂ ತಚ್ಛುದ್ಧಸತ್ತ್ವಂ ಚ ವಿಜ್ಞಾನಂ ಜೀವನಂ ಪಯಃ ॥ ೯ ॥

ನಾರವೆಂದರೆ ಪಯವು ಅದುವೆ ಜೀವನವು
ಶುದ್ಧಸತ್ತ್ವವು ಮತ್ತು ಅದುವೆ ವಿಜ್ಞಾನ ।
ಅಯನವೆಂದರೆ ಪಥವು ಮತ್ತು ವಾಸಸ್ಥಳವು
ಹೀಗೆ ನಾರಾಯಣನು ನೀನು ಶ್ರೀರಾಮ ॥

ಲೌಕಿಕಾಧ್ಯಾತ್ಮಿಕಾರ್ಥೇಷು ಸಮದೃಷ್ಟಿವಿವಕ್ಷಯಾ ।
ಆಸನಂ ತೇ ಮಹಾಪದ್ಮಂ ಪರ್ಣಯೋರುಪರಿ ಸ್ಥಿತಮ್ ॥ ೧೦ ॥

ಓ ಪ್ರಭುವೆ; ಅಧ್ಯಾತ್ಮ–ಲೌಕಿಕಾರ್ಥಗಳಲ್ಲಿ
ಸಮಭಾವವಿರಬೇಕು ಅದನು ಸೂಚಿಸಲು ।
ಮಹಾಪದ್ಮವು ಎಂಬ ನಿನ್ನ ಆಸನವು
ಎಲೆಗಳೆರಡರ ಮೇಲೆ ತಾನು ನಿಂತಿಹುದು

ದೀಪ್ತವರ್ಣೇ ವಿಭೋ ಪರ್ಣೇ ದಿವ್ಯಾರ್ಣವಸಮುತ್ಥಿತೇ ।
ಆಜ್ಞಾಚಕ್ರಸ್ಯ ಮೇಽನುಜ್ಞಾಂ ದತ್ವಾ ಪ್ರಾಪ್ಯಂ ತವಾಂತಿಕಮ್ ॥

ಹೊಳೆವ ಬಣ್ಣದ ಎರಡು ಎಲೆಗಳಿವು ವಿಭುವೆ
ದಿವ್ಯಸಾಗರದಿಂದ ಮೇಲೆ ಬಂದಿಹವು ।
ಆಜ್ಞಾಚಕ್ರದ ಜೊತೆಗೆ ಇವಕೆ ಸಂಬಂಧ
ಅಪ್ಪಣೆಯು ಕೊಡಲೆನಗೆ ನಿನ್ನ ಬಳಿ ಬರಲು ॥

ಅಯೋಧ್ಯೈವ ಸಹಸ್ರಾರಂ ಅರಿಷಡ್ವರ್ಗದುರ್ಗಮಮ್ ।
ಯೋಗಿಗಮ್ಯಂ ಮಹಾಪದ್ಮಂ ನಿತ್ಯಾನಂತಪ್ರದಾಯಕ ॥ ೧೨ ॥

ಅಯೋಧ್ಯೆಯೆಂದರೆ ಸಹಸ್ರಾರ ಚಕ್ರವು ದಿಟವು
ಅರಿವರ್ಗದಾರಿಕೆ ಗಮನವಿಲ್ಲಿಲ್ಲ ।
ಈ ಮಹಾಪದ್ಮವನು ಯೋಗಿಗಳು ಮಾತ್ರ
ತಲುಪುವರು; ಓ ಶಾಶ್ವತಾನಂದದಾತ ॥

ಆನಂದಮಯಕೋಶೇಽಸ್ಮಿನ್ ವಿಜ್ಞಾನಾರ್ಣವಸಂಭವೇ ।
ಸಹಸ್ರೇಂದುಪ್ರಭೇ ಪದ್ಮೇ ಪೂರ್ಣಾನಂದ ತವ ಸ್ಥಿತಿಃ ॥ ೧೩ ॥

ವಿಜ್ಞಾನವೆಂಬ ಸಾಗರದಿಂದ ಹೊರಬಂದ
ಆನಂದಮಯಕೋಶವಾಗಿ ನಿಂತಿರುವ ।
ಹಪ್ಪುನೂರರ ಚಂದ್ರಪ್ರಭೆಯು ಕಮಲದ ಮೇಲೆ
ನೀನು ಪೂರ್ಣಾನಂದಮಯನೆ ಕುಳಿತಿರುವೆ ॥

ರೇಫಸ್ತ್ವಗ್ನಿಸ್ಯ ಜೀವಾತ್ಮಾ ಸಪ್ರಾಣಃ ಸ್ವರಸಂಸ್ಥಿತಃ ।
ಮಕಾರಾನ್ನವ್ಯಕ್ತಾ ತಸ್ಯ ಸರ್ವಂ ರಾಮಮಯಂ ಜಗತ್ ॥ ೧೪ ॥

ರಕಾರದಿಂದಗ್ನಿಯು ಸಪ್ರಾಣಜೀವಾತ್ಮ
ಮಕಾರದಿಂದದಕೆ ಸತತ ನವ್ಯಕತೆಯು ।
ಸಂಸ್ಥಿತಿಯು ಸೂಚನೆಗೆ ಎರಡು ಸ್ವರಗಳು ಇಲ್ಲಿ
ತುಂಬಿಹುದು ಜಗವೆಲ್ಲ ರಾಮಮಯವಾಗಿ ॥

ಶ್ವಾಸಾದಾನಕ್ರಿಯಾ ಯಾ ಸಾ ಸಕಾರಾದಭಿಗಮ್ಯತೇ ।
ತಕಾರಾದವ್ಯಕ್ತತ್ವಂ ಚ ಸ್ವರಾಭ್ಯಾಂ ಶಕ್ತಿ ಸಂಸ್ಥಿತೀ ॥ ೧೫ ॥

ಶ್ವಾಸವನು ಒಳಗೆಳೆದುಕೊಳ್ಳುವಾಗೆಲ್ಲ
ಕಂಡುಬರುವಕ್ಷರವೆ ಇಲ್ಲಿರುವ ಸತ್ಯ ।
ತಕಾರಾಕ್ಷರವಿಲ್ಲ ಅವ್ಯಕ್ತ ಸೂಚಕವು
ಶಕ್ತಿ–ಸಂಸ್ಥಿತಿಗಳೇ ಸ್ವರಗಳೆರಡಿಲ್ಲಿ ॥

ವ್ಯಕ್ತಃ ಸರ್ವಾತ್ಮರೂಪೇಣ ರಾಮ ತ್ವಂ ನಿತ್ಯಚೇತನಃ ।
ವರ್ಧನಾಶಕ್ತಿಯುಕ್ತಸ್ತ್ವಂ ಶ್ರೀರಾಮ ಇತಿ ಕೀರ್ತ್ಯಸೇ ॥ ೧೬ ॥

ಸರ್ವಾತ್ಮರೂಪದಲಿ ವ್ಯಕ್ತನಾಗಿರುವೆ
ರಾಮನೆ ನೀನಿರುವೆ ನಿತ್ಯಚೇತನನು ।
ವರ್ಧನಾಶಕ್ತಿಯಿಂದೊಡಗೂಡಿ ನೀನು
ಪಡೆಯುವೆ ಸ್ತುತಿಯನ್ನು ಶ್ರೀರಾಮನೆಂದು

ಸೀತಾ ತೇ ಪ್ರಕೃತಿರ್ಮೂಲಾ ಸರ್ವಶಕ್ತಿಃ ಸನಾತನಾ ।
ರಜಸೋ ರಾವಣಾನ್ಮುಕ್ತಾ ರಾಮ ಜ್ಞಾನಾಗ್ನಿನಾದ್ಭುತಾ ॥ ೧೭ ॥

ನಿನ್ನ ಮೂಲಪ್ರಕೃತಿ ಸೀತೆಯಾಗಿಹಳು
ಸರ್ವಶಕ್ತಿಯು ಆಕೆ ಶಾಶ್ವತಳು ರಾಮ ।
ರಜೋಗುಣದ ಸಾಕಾರವಾದ ರಾವಣನಿಂದ
ಮುಕ್ತಳಿವಳಾಧ್ಭುತಳು ಜ್ಞಾನಾಗ್ನಿಯಿಂದ ॥

ಗುರುಪಾದಾರವಿಂದಾಭ್ಯಾಂ ಸಸೀತಾರಾಮ ತೇ ಸದಾ ।
ಭಕ್ತಾನಾಂ ಕಲ್ಪವೃಕ್ಷಾಭ್ಯಾಂ ನಮನಂ ದೇವ ಸಸ್ತವಮ್ ॥ ೧೮ ॥

ಸೀತೆಯಿಂದೊಡಗೂಡಿ ಇರುವ ರಾಮನೆ ನಿನ್ನ
ಗುರುಪಾದಪದ್ಮಗಳು ನಿನ್ನ ಭಕ್ತರಿಗೆ ।
ಕಲ್ಪವೃಕ್ಷಗಳೆಂದು ಖ್ಯಾತಿಪಡೆದಿವೆ ದೇವ
ಸರ್ವದಾ ಸ್ತುತಿಸಹಿತ ನಮನ ನಿನಗೆ ॥

(27 ನೇ ಪುಟ ನೋಡಿ)

# ಶ್ರೀ ತ್ಯಾಗರಾಜಸ್ವಾಮಿ ಕೃತಿಗಳ ಹಲವುಮುಖಗಳು

ಒಬ್ಬ ಪ್ರಸಿದ್ಧ ಪುರುಷನಿಗೆ ಸಲ್ಲಬೇಕಾದ ಪ್ರಾಪಂಚಿಕ ಪರಿಣಾಮಗಳೆಲ್ಲ ತ್ಯಾಗಯ್ಯನವರ ವ್ಯಕ್ತಿತ್ವದ ಮೇಲೂ ಆಗಿ, ಅವರನ್ನು ಕುರಿತ ಹಲವು ದಂತ ಕತೆಗಳೂ ಹುಟ್ಟಿಕೊಂಡವು ಆದರೆ ಅವರ ತತ್ತ್ವಗಳನ್ನು ಅವರು ಹೇಳಿದಂತೆ ತಿಳಿದು, ಅದರಂತೆ ನಡೆದು, ಅವರನ್ನು ಉತ್ತಮ ಮಾನವರನ್ನಾಗಿ ಕಾಣುವ ಪ್ರಯತ್ನ ಬಹುಶಃ ಇನ್ನೂ ನಡೆಯಬೇಕಾಗಿದೆ.

ತ್ಯಾಗಯ್ಯನವರು ಒಬ್ಬ ಕವಿಯಾಗಿ, ಸಂತರಾಗಿ ಬದುಕಿನಲ್ಲಿ ಸಂಸಾರಿಯಾಗಿ ಲೋಕದ ಅನುಭವಗಳನ್ನೆಲ್ಲ ಅನುಭವಿಸಿ, ಸಾಧಕರಾಗಿ ಸಾಧಾರಣ ಮಾನವರ ಮಟ್ಟದಿಂದ ಮೇಲೇರಿ, ಉತ್ತಮ ಸಮಾಜ ಸ ಧಾರಕರಾಗಿ, ಕೃತಿಕಾರರಾಗಿ, ಮಹಾತ್ಮರಾಗಿ ಬಾಳ ಹಾದಿಯಲ್ಲಿ ತಮ್ಮ ಹೆಜ್ಜೆಗಳನ್ನು ಒತ್ತಿಹೋಗಿದ್ದಾರೆ.

ಬರಿಯ ಛಂದಸ್ಸಿಗಾಗಲೀ, ಪಾದಗಳಿಗಾಗಲೀ, ಪ್ರಾಸಕ್ಕಾಗಲೀ, ಹೊಂದಿಸಿ ಬರೆದುದೆಲ್ಲ ಕವಿತೆಯಾಗುವುದಿಲ್ಲ, ಕಾವ್ಯವಾಗುವುದಿಲ್ಲ ಅದರಲ್ಲಿ ಕಾವ್ಯಕ್ಕೆ ತಕ್ಕ ವಸ್ತು, ವಸ್ತುವಿನ ನಿರೂಪಣೆಯಲ್ಲಿ ನೂತನವಾದ ಭಾವಗಳು ಹೇಳುವರೀತಿಯಲ್ಲಿ ಕಾವ್ಯದ ಲಕ್ಷಣಗಳೆಲ್ಲ ಇರಬೇಕು.

ಇದು ಸೌಂದರ್ಯಗುಣ ಪ್ರಕಾಶಂ, ಇದು ಕಾನಗ್ರಾಮ್ಯತಾಧಾನಮಿಂ
ತಿದು ಭಾಸ್ವತ್ಸರಭಾಗರಮ್ಯಂ, ಇದು ಬಂಧಾಶ್ಲೇಷ ವಿಚ್ಛಿತ್ತಿಗಾ
ಸ್ಪದಂ ಎಂದುಚಿತ ಪ್ರಯೋಗ ವಿಧಿಯಿಂ ಸೈತಪ್ಪಿನಂ ತಿರ್ದಿ ಪೇ
ಳ್ವುದು ಪೂಮಾಲೆಯು ನಿಂಬಿನಿಂ ಸಮೆವ ಪೋಲ್ ಸತ್ಕಾವ್ಯಮಂ ಕಬ್ಬಿಗಂ

—ನಾಗವರ್ಮ

ಕವಿಯು ಪದಗಳ ಮತ್ತು ಭಾವಗಳ ಪ್ರಯೋಗಗಳಲ್ಲಿ ಬಹುಕುಶಲನೂ, ಜಾಗ್ರತನೂ ಆಗಿರಬೇಕು. ಮಾಲೆಕಾರನು ಪುಷ್ಪಗಳನ್ನಾರಿಸಿಕೊಳ್ಳುಂತೆ ಕವಿಯೂ ಕಲೆಗಾರನಾಗಿರಬೇಕು. ಇದರಿಂದ ಒಂದು ವಿಷಯ ಸ್ಪಷ್ಟವಾಗುತ್ತದೆ

—ಶ್ರೀ ಎನ್. ಎಸ್. ಮೂರ್ತಿ

ಇತ್ತೀಚೆಗೆ ಗಾಯಕರಲ್ಲಿ ಕೃತಿಗಳ ಸಾಹಿತ್ಯವನ್ನು ಶುದ್ಧವಾಗಿ ಹಾಡುವ ಅಭ್ಯಾಸ ಹೆಚ್ಚಾಗಿದೆ ಆದರೂ ಗಾಯಕರು ತಮ್ಮಗಾಯನದ ಅವಶ್ಯಕತೆಗಳಿಗೆ ಬೇಕಾದ ಮಟ್ಟಿಗೆ ಮಾತ್ರ, ತಮಗೆ ತೋರಿದಂಥ, ಒದಗಿದಂಥ ಕೆಲವು ಕೃತಿಗಳನ್ನು ಆರಿಸಿ ಬಳಸಿಕೊಂಡು ಅದರಲ್ಲೂ ಪಲ್ಲವಿ, ಅನುಪಲ್ಲವಿಗಳ ಅನಂತರ ಕೀರ್ತನಕಾರರು ಎಷ್ಟೇ ಚರಣಗಳನ್ನು ರಚಿಸಿದ್ದರೂ ಅವರ ಅಂಕಿತವಿರುವ ಚರಣವನ್ನು ಹಾಡಿ ಮುಗಿಸುವ ವಾಡಿಕೆಯೇ ಬೆಳೆದು ಬಂದಿದೆ. ಬಹುಶಃ ತ್ಯಾಗರಾಜ ಸ್ವಾಮಿಗಳ ಕಾಲದಲ್ಲಿ ಚರಣಗಳನ್ನೂ ಹಾಡುತ್ತಿದ್ದಿರಬಹುದು. ಆ ಎಲ್ಲ ಚರಣಗಳಲ್ಲಿಯೂ ಇರುವ ವಸ್ತುವನ್ನು, ನೀತಿಯನ್ನು, ತತ್ತ್ವವನ್ನು, ಸತ್ತ್ವವನ್ನು ಜನ ಅರಿಯಲಿ, ಅವರ ಬಾಳು ಹಸನಾಗಲಿ, ಧರ್ಮದ ಉನ್ನತಿಯಾಗಲಿ – ಎಂದೇ ತ್ಯಾಗರಾಜಸ್ವಾಮಿಗಳ ಉದ್ದೇಶ. ಆದರೆ, ಸುಮಾರು ಎರಡು ಶತಮಾನಗಳು ಕಳೆದು, ಕಾಲಬದಲಾಗಿ ಗಾಯನದ ರೂಪವೂ ಬದಲಾಗಿದೆ

ತ್ಯಾಗರಾಜ ಸಾಹಿತ್ಯದಲ್ಲಿ ಅಡಕವಾಗಿರುವ ವೃತ್ತಾಂತ, ಸಮಾಜಕ್ಕೆ, ಮಾನವ ಕುಲಕ್ಕೆ ಅವರ ಸಂದೇಶ, ಸಾಹಿತ್ಯದ ಸೌರಭ ಮುಂತಾದ ಹಲವು ಅನರ್ಘ್ಯ ವಸ್ತುಗಳು ನಮ್ಮ ಸಮಾಜಕ್ಕೆ ಕಣ್ಮರೆಯೇ ಆಗಿದ್ದು, ಅವನ್ನು ಅರಸಿ ಪಡೆಯುವ ಕುತೂಹಲ ಆಸೆ ಆಕಾಂಕ್ಷೆಗಳೂ ಹಲವರಿಗೆ ಇಲ್ಲದೆ ನಷ್ಟ ಸಂಭವಿಸುತ್ತಿದೆ. ಆದರೆ ಇದನ್ನು ಬಿಡಿಸಿ ತೋರಿಸಿದಾಗ ಇದರ ರುಚಿಯನ್ನು ಸವಿದವರೆಲ್ಲ ಬಲು ಸಂತೋಷ ವ್ಯಕ್ತಪಡಿಸಿ ತೃಪ್ತರಾಗಿದ್ದಾರೆ. ಈ ಕಾರಣದಿಂದ ಈ ಜನಕ್ಕೆ ಆಸಕ್ತಿಯಿಲ್ಲ, ದೊರೆತರೆ ಸವಿದು ಸುಖಪಡುತ್ತಾರೆ ಎಂಬುದೂ ನನ್ನ ಅನುಭವ.

ಒಬ್ಬ ಉತ್ತಮ ವಾಗ್ಗೇಯಕಾರನಲ್ಲಿ ನಾವು ಕಾಣಬೇಕಾದದು ವಾಕ್ಯ ಮತ್ತು ಗೇಯಗಳೆರಡನ್ನೂ. ಆದರೆ ಗೇಯವನ್ನು ಮಾತ್ರ ಯಥಾಶಕ್ತಿ ಬಳಸಿಕೊಂಡು ವಾಗ್ವೈಭವವನ್ನು ಕಾಣಲಾರದ ಸ್ಥಿತಿಯಲ್ಲಿ ಶಾರದೆಯ ಪೂರ್ಣದರ್ಶನವಾಗಲಾರದು ತಾಯಿ ವೀಣಾಪುಸ್ತಕಧಾರಿಣಿ ತಾನೆ? ಸಂಗೀತ ಸಾಹಿತ್ಯಗಳೆರಡೂ ದೇವಿಯ ಎರಡು ಸುಂದರಾಂಗಗಳೇ ಅಲ್ಲವೆ? ಇವೆರಡನ್ನೂ ದರ್ಶನ ಮಾಡಿದರೆ ತಾನೆ ಸಂಸ್ಕೃತಿಯ ಪೂರ್ಣ ದರ್ಶನವಾದೀತು?

ತ್ಯಾಗರಾಜರ ಸಂಗೀತದ ಬಗ್ಗೆ ಅವರ ಜೀವಿತಕಾಲದಿಂದಲೇ ಸಾಕಾದಷ್ಟು ಪ್ರಚಾರವೂ ಉತ್ಸಾಹವೂ ಗೋಚರವಾಗಿವೆ. ಅದು ಅಂದಿನಿಂದಲೂ ಅನೇಕರಿಗೆ ಶಾಂತಿಯನ್ನೂ ಸಂತೋಷವನ್ನೂ ಭಕ್ತಿಯನ್ನೂ ಒದಗಿಸುತ್ತಿದೆ. ಆದರೆ ತ್ಯಾಗಯ್ಯನವರು ಭುಕ್ತಿ ಮುಕ್ತಿಗಳೆರಡನ್ನೂ ಪ್ರಾಪ್ತಿ ಮಾಡಿಕೊಳ್ಳಲು ಕೀರ್ತನೆಗಳನ್ನು ರಚಿಸಿದರು. ಭಕ್ತಿಯಿಲ್ಲದ ಕವಿವರೇಣ್ಯರು ಭಾವರಹಿತರಾಗಿ ಇದ್ದುದನ್ನು ಕಂಡ ರಸಿಕ ಶಿರೋಮಣಿಯಾದ ದಾಶರಥಿಗೆ ತ್ಯಾಗಯ್ಯನವರು ರಚಿಸಿದ ಈ ಕೃತಿಗಳು ಬಹುಪ್ರಿಯವಾದುವು. ಅವರ ಕೃತಿಗಳು ದೂರದೂರದ ದೇಶಗಳಲ್ಲೂ ಪ್ರಕಾಶಿಸಿ ಪ್ರಸಿದ್ಧಿ ಪಡೆದವು

ಎಲ್ಲ ಬಲ್ಲವರಿಲ್ಲ, ಬಲ್ಲವರು ಬಹಳಿಲ್ಲ
ಬಲ್ಲವರು ಇದ್ದು ಬಲವಿಲ್ಲ–ಸಾಹಿತ್ಯ
ವೆಲ್ಲರಿಗು ಇಲ್ಲ ಸರ್ವಜ್ಞ

ಸಾಹಿತ್ಯವೆಂಬುದು ಎಲ್ಲರಿಗೂ ದೊರಕ ಬಲ್ಲ ಸಾಮಾನ್ಯ ಸರಕಲ್ಲ, ಅದು ಸದಾಕಾಲದಲ್ಲಿಯೂ ತೋರಿದಾಗ ಹೊರತರಬಲ್ಲ ವಸ್ತುವಲ್ಲ. ಯಾರೋ ಒಬ್ಬ ಮಹಾನುಭಾವನ ಮೇಲೆ ದೈವದೊಲುಮೆ ಬಿದ್ದಾಗ ಭುವನದ ಭಾಗ್ಯದಿಂದ ಸಾಹಿತ್ಯ ಅರಳಿ ಬೆಳಗಬಹುದು ಇಂಥ ಒಂದು ಪುಣ್ಯ ಪರಿಪಾಕದಿಂದ ತ್ಯಾಗರಾಜ ಸಾಹಿತ್ಯ ನಮ್ಮನಾಡಿಗೆ ಪ್ರಾಪ್ತವಾಯಿತು. ಉತ್ತಮಸಾಹಿತ್ಯದ ಎಲ್ಲ ಲಕ್ಷಣಗಳೂ ತ್ಯಾಗರಾಜ ಕೃತಿಗಳಲ್ಲಿವೆ, ಈ ಸಿಂಧುವಿನ ಒಳ ಹೊಕ್ಕು ಹುಡುಕುವ ಕ್ರಿಯಾಶೀಲರಿಗೆ ಅವರು ಬಯಸುವಷ್ಟು ರತ್ನಗಳ ರಾಶಿ ದೊರೆಯುತ್ತದೆ. ಬೆಳೆ ಹೇರಳವಾಗಿದೆ, ಕುಯ್ದು ಅನುಭವಿಸಬೇಕು, ಅಷ್ಟೆ.

'ಗಿರಿರಾಜ ಸುತಾತನಯ' ಎಂದು ಗಣಪತಿಯನ್ನು ಸ್ತೋತ್ರಮಾಡುವಾಗ ತಾವು ಗಿರಿರಾಜ ಕವಿಯ ಮಗನ ಮಗ ಎಂಬುದನ್ನು ಹೇಳುವ ಸ್ವಾರಸ್ಯವಿದೆ. 'ಸೀತಮ್ಮ ಮಾಯಮ್ಮ, ಶ್ರೀರಾಮುಡು ಮಾತಂಡ್ರಿ' ಎನ್ನುವಾಗ ತಮ್ಮ ಸ್ವಂತ ತಾಯಿ ತಂದೆಯರ ಹೆಸರನ್ನೂ ಹೇಳುತ್ತಾರೆ 'ತಲ್ಲಿ ತಂಡ್ರಿ ಭಕ್ತಿ ನೊಸಗಿ ರಕ್ಷಿಂಚಿರಿ, ತಕ್ಕಿನವಾರ ಲೆಂತೋ ಹಿಂಸಿಂಚಿರಿ' (ತಾಯಿತಂದೆಯರು ನನ್ನನ್ನು ಭಕ್ತಿಮಾರ್ಗದಲ್ಲಿ ನಡೆಸಿ ಕಾಪಾಡಿದರು, ಉಳಿದವರು ಪರಿಪರಿಯಾದ ಹಿಂಸೆಯನ್ನೇ ಕೊಟ್ಟರು) 'ನಡುಮಿ ಪ್ರಾಯಮುನ ಪೂರ್ವಜು ಬಾಧ ದೀರ್ಚಲೇದಾ' (ನನ್ನ ಅಣ್ಣನಿಂದ ನನಗಾದ ಕೋಟಲೆಯನ್ನು ಪರಿಹರಿಸಿದೆಯಲ್ಲವೆ?) ಮುಂತಾಗಿ ಹೇಳುವಾಗ ತಮ್ಮ ಜೀವನ ಚರಿತ್ರೆಯ ಪ್ರಸಂಗಗಳನ್ನು ಹೇಳುತ್ತಾರೆ. 'ಗಿರಿಪೈ ನೆಲಕೊನ್ನ ರಾಮುನಿ ಗುರಿತಪ್ಪಕ ಗಂಟಿ' (ಬೆಟ್ಟದ ಮೇಲೆ ಅಥವ ಸಹಸ್ರಾರಕಮಲದಲ್ಲಿ ನೆಲೆಸಿರುವ ಶ್ರೀರಾಮನನ್ನು ಗುರಿತಪ್ಪದೆ ಕಂಡೆ) 'ಸೊಗಸು ಜೂಡ ತರಮಾ' (ಅವನ ಸೊಗಸು ನೋಡಲಳವೇ) 'ವರಬಿಂಬ ಸಮಾಧರಮು, ವಕುಳ ಸುಮಂಬುಲ ಯುರಮು, ಕರಧೃತ ಶರಕೋದಂಡ ಮರಕತಾಂಗ, ಚಿರುನವ್ವುಲ ಮುಂಗುರುಲು (ಕಿರುನಗೆ ಮುಂಗುರುಳು) ಮರಿಕನ್ನುಲ ತೇಟಮು (ತಿಳಿಯಾದ ಪರಿಶುದ್ಧವಾದ ಕಣ್ಣಿನ ನೋಟ) ಇಟುವಂಟಿ ಸೊಗಸುಜೂಡ ತರಮಾ?' (ಇಂಥ ಸೊಗಸು ಕಾಣಲಳವೇ) ಎನ್ನುವಾಗ ಸ್ವಾಮಿಯ ಪ್ರತ್ಯಕ್ಷ ದರ್ಶನ ಭಾಗ್ಯವನ್ನೇ ಪಡೆದ ಆನಂದಾನುಭವ ವ್ಯಕ್ತವಾಗಿದೆ 'ನಿನು ವಿನಾ ಮದಿ ಎಂದು ನಿಲುವದೇ, ಶ್ರೀಹರಿಹರಿ' (ಶ್ರೀಹರಿ, ನಿನ್ನನ್ನು ಬಿಟ್ಟು ನನ್ನ ಮನ ಬೇರೆಲ್ಲೂ ನಿಲ್ಲದು) 'ನಿನ್ನೇ ನಮ್ಮಿನಾನು ನೀರಜಾಕ್ಷ' (ನಿನ್ನನ್ನೇ ನಂಬಿರುವೆನೋ ನೀರಜಾಕ್ಷ) 'ಕಾರು ವೇಲ್ಪುಲು ನೀಕು ಸರಿಕಾರು, (ಯಾವ ದೇವರುಗಳೂ ನಿನಗೆ ಸಮಾನರಲ್ಲ) ಇತ್ಯಾದಿ ಕೀರ್ತನೆಗಳಲ್ಲಿ ತಾವುನಂಬಿದ ಏಕದೈವವನ್ನು ಏಕನಿಷ್ಠೆಯಿಂದ ಕಾಣುವ ಭಾವವಿದೆ. "ಚನಿ ತೋಡಿತೇವೆ, ಓ ಮನಸಾ, ಚಿರಕಾಲಮು ಸುಖಮನುಭವಿಂಪವೇಗನೋ" (ಎಲೆ ಮನವೇ, ಹೋಗಿ ಸಾಕ್ಷನನ್ನು ಕರೆದುತಾ, ಚಿರಕಾಲ ಸುಖಾನುಭವ ಹೊಂದಲು) ಎಂದಾಗ ನಾಯಕ ನಾಯಕೀ ಭಾವಪ್ರಕಟವಾಗಿದೆ. 'ಜೀವುಲೋ, ಬ್ರಹ್ಮಲೋ ಶಿವ ಕೇಶವಾದುಲಲೋ ಪ್ರೇಮಮೀರ ವೆಲಗುಚುಂಡು ಬಿರುದು ವಹಿಂಚಿನ ಸೀತಾರಾಮ' (ಇರವೆಯಿಂದ ಸಣ್ಣ ಜೀವಿಯಲ್ಲೂ ಬ್ರಹ್ಮದಷ್ಟು ಅತೀತದಲ್ಲೂ ಶಿವಕೇಶವಾದಿ ದೇವ ರೂಪಗಳಲ್ಲಿಯೂ ಬಹುಪ್ರೇಮವಿಟ್ಟು, ಬೆಳಗುತ್ತಿರುವ ಸೀತಾರಾಮ) ಎನ್ನುವಲ್ಲಿ ಅಣೋರಣೀಯನಾಗಿ, ಮಹತೋಮಹೀಯನಾಗಿ ಮೆರೆವ ಸ್ವಾಮಿಯ ಮಹಿಮೆಯನ್ನು ಕೊಂಡಾಡುತ್ತಾರೆ. 'ನಿಧಿಚಾಲಸುಖಮಾ, ರಾಮುನಿ ಸನ್ನಿಧಿ ಸೇವ ಸುಖಮಾ' ಎಂದಾಗ ಭಗವದ್ವಸ್ತುವನ್ನು ಕಂಡು ಉಳಿದೆಲ್ಲವನ್ನೂ ಧಿಕ್ಕರಿಸಿದ ಧ್ರುವನಂತೆ, ಹಣವನ್ನೂ ಐಹಿಕ ಭೋಗಗಳನ್ನೂ ತೃಣೀಕರಿಸುತ್ತಾರೆ ಮುನು ಮೀ ಸಮೀಪಮುನ ವೆಲಯು ಸನ್ಮುನುಲನೆಲ್ಲನಣಿಮಾದಿ ಲೀಲಲಜೇ ತಿನ್ನಗನು ಪಾಲನಮು ಜೇಸಿನಟ್ಟು ನನ್ನು ಗಾಚಿತಿವಿ– ಎಂದು ಹೇಳುವಾಗ ಹಿಂದಿನ ಕಾಲದಲ್ಲಿ ಭಗವತ್ಸಾಮೀಪ್ಯ ಪಡೆದ ಸನ್ಮುನಿಗಳಿಗೆಲ್ಲ ಅಣಿಮಾದಿ ಲೀಲೆಗಳನ್ನು ಪ್ರದರ್ಶಿಸಿದಂತೆ, ಅವರಿಗುಂಟಾದ ಭಗವದನುಭವ ತಮಗೂ ದೊರೆತ ಭಾಗ್ಯವನ್ನು ಕೊಂಡಾಡುತ್ತಾರೆ ಒಕ ವೇಳ ನಿನ್ನು ಪ್ರೇಮಮೀರ ಮದಿನೆಂಚಿ ಮಂಚಿ ಪೂಲ ಪೂಜಿಂಪುಚು, ಒಕವೇಳ ಕೋಪಗಿಂಚಿ ನಿನ್ನು ದೂರುಚುಂಟಿ ಗಾನಿ, ತನಮೀದನೇ ಜೆಪ್ಪುಕೋವಲೆಗಾಕ ನಿನ್ನಾಡ ಪನಿ ಲೇದುರಾ (ಒಮ್ಮೆ ಪ್ರೇಮ ಭಕ್ತಿಗಳಿಂದ ನಿನ್ನನ್ನು ನೆನೆದು ಒಳ್ಳೆಯ ಹೂಗಳನ್ನೇ ಪೂಜಿಸಿದೆ ನಾನು, ಮತ್ತೊಮ್ಮೆ ನಿನ್ನ ಮೇಲೆ ಕೋಪಗೊಂಡು ನಿನ್ನನ್ನು ದೂರಿದೆ ತಪ್ಪು ನನ್ನಲ್ಲಿರುವಾಗ ನಿನ್ನನ್ನೇಕೆ ಆಡಿಕೊಳ್ಳಬೇಕು) ಎಂದು ಭಗವದನುಭವ ದೂರವಾದ ತಪ್ಪನ್ನು ತಮ್ಮ ಮೇಲೇ ಆರೋಪಿಸಿಕೊಳ್ಳುತ್ತಾರೆ ಪಲುಕು ಬೋಟನಿ ಸಭಲೋನ ಪತಿತ ಮಾನವುಲ ಕೊಸಗೇ ಖಲುಲನೆಚ್ಚಟ ಪೊಗಡನು (ವಾಗ್ದೇವಿಯನ್ನು ಸಭೆಗಳಲ್ಲಿ ಪತಿತರಪಾಲು ಮಾಡುವ ಖಳರನ್ನು ನಾನು ಒಪ್ಪುವುದಿಲ್ಲ) ಎಂದು ವಿದ್ಯೆಯನ್ನು ಹಣಕ್ಕೆ ಮಾರಿಕೊಳ್ಳುವವರನ್ನು ಮೂದಲಿಸುತ್ತಾರೆ. ಈ ರೀತಿಯಲ್ಲಿ ತಮ್ಮ ಮನಸ್ಸಿಗೆ ಯಾವ ಭಾವವು ಯಾವಸಮಯದಲ್ಲಿ ಗೋಚರಿಸಿದರೂ ಅದನ್ನು ಸುಂದರವಾದ ವಾಕ್ಯ ಮತ್ತು ಗೇಯಗಳಲ್ಲಿ ಬಂಧಿಸಿಡಬಲ್ಲ ಅಪೂರ್ವ ಶಕ್ತಿ ತ್ಯಾಗಯ್ಯನವರು.

ಆದಿಕವಿ ವಾಲ್ಮೀಕಿ ರಾಮಾಯಣ ಕಾವ್ಯವನ್ನು ರಚಿಸಿದನಂತರ, ಇತರ ಹಲವು ಕವಿಗಳೂ ತಮ್ಮ ತಮ್ಮ ಭಾಷೆಗಳಲ್ಲಿ ತಮ್ಮ ತಮ್ಮ ತೇಜಸ್ಸಿಗೆ ದರ್ಶನಕ್ಕೆ ಅನುಸಾರವಾಗಿ ರಾಮಾಯಣವನ್ನು ಬರೆದರು. ಇವರಿಗೆಲ್ಲ ರಾಮಾಯಣ ಕಥೆಯ ಕೆಲವು ಅಂಶಗಳು ವಾಲ್ಮೀಕಿ ರಾಮಾಯಣಕ್ಕಿಂತ ಬೇರೆಯಾಗಿ, ವಿಶೇಷವಾಗಿ ಗೋಚರಿಸಿವೆ. ಭಗವದ್ವಸ್ತು ಅಪ್ರಮೇಯ. ಅದರ ದರ್ಶನ ಎಲ್ಲರಿಗೂ ಒಂದೇ ರೀತಿಯಾಗಿರಬೇಕಾಗಿಲ್ಲ. ದೇವಕಿಗೆ, ಯಶೋದೆಗೆ, ವಿದುರನಿಗೆ, ದುರ್ಯೋಧನನಿಗೆ, ಅಕ್ರೂರನಿಗೆ ಗೋಚರಿಸಿದ ಭಗವದನುಭವಗಳೆಲ್ಲ ಬೇರೆ ಬೇರೆಯೇ. ಇದು ಅವನ ಇಚ್ಛೆ, ಅವನ ಲೀಲೆ. ಇದೇ ರೀತಿಯಲ್ಲಿ ತ್ಯಾಗರಾಜಸ್ವಾಮಿಗಳಿಗೂ ರಾಮನಲೀಲೆ ಬೇರೆ ರೀತಿಯಲ್ಲಿ ಗೋಚರಿಸಿದೆ.

ವನವಾಸ ಸಮಯದಲ್ಲಿ ಸೀತೆ ಒಂದು ಚಮರೀ ಮೃಗವನ್ನು ಕಂಡು ಅದರ ಬಾಲದ ಸೊಂಪಿಗೆ ಮಾರು ಹೋಗಿ ಆ ಬಾಲವನ್ನು ಬಯಸುತ್ತಾಳೆ. ಪ್ರಾಣ ಪ್ರಿಯೆಯಾದ ಸೀತೆಯ ಇಚ್ಛೆಯನ್ನು ಈಡೇರಿಸಲು ರಾಮ ಆ ಮೃಗದ ಬಾಲಕ್ಕೆ ಗುರಿಯಿಟ್ಟು ಬಾಣ ಪ್ರಯೋಗಮಾಡುತ್ತಾನೆ. ಈ ಸನ್ನಿವೇಶದಲ್ಲಿ ಶ್ರೀರಾಮನ ಶುಭದೃಷ್ಟಿ ಆ ಮೃಗದ ಮೇಲೆ ಬಿದ್ದು ಅದಕ್ಕೆ ದಿವ್ಯಜ್ಞಾನ ಉದಯವಾಗುತ್ತದೆ. ರಾಮಬಾಣಕ್ಕೆ ಬಾಲವನ್ನು ಕಳೆದು ಕೊಳ್ಳುವ ಬದಲು ತನ್ನ ಪ್ರಾಣವನ್ನೆ ಸಮರ್ಪಿಸಿದರೆ, ಮುಕ್ತಿಯನ್ನೇ ಪಡೆಯ ಬಹುದೆಂದು, ಒಡನೆಯೇ ಬಾಣಕ್ಕೆ ತನ್ನ ಕತ್ತನ್ನೇ ಒಡ್ಡುತ್ತದೆ. ಇದನ್ನು ಕಂಡು ಮನ ಕರಗಿದ ಸ್ವಾಮಿ ತನ್ನಿಂದ ನಿರಪರಾಧಿಯಾದ ಒಂದು ಪ್ರಾಣಿಯ ಹತ್ಯೆಯಾಗದಂತೆ, ಮತ್ತೊಂದು ಬಾಣವನ್ನು ಬಿಟ್ಟು ಮೊದಲಿನ ಬಾಣವನ್ನು ಉಪಸಂಹಾರ ಮಾಡು ತ್ತಾನೆ, ದೀನಾರ್ತಿ ಭಂಜನನೆನಿಸುತ್ತಾನೆ. ಕಾಲಾತೀತನಾದ ಸ್ವಾಮಿಯ ಇಷ್ಟು ಲೀಲೆಯೂ ಒಂದು ಕ್ಷಣಮಾತ್ರದಲ್ಲಿಯೇ ನಡೆಯುವ ವೈಭವವನ್ನಿಲ್ಲಿ ಕಾಣಬಹುದು. ಶ್ರೀರಾಮ ಮಹಿಮೆ ವಾಚಾಮಗೋಚರ ಎನ್ನುತ್ತಾರೆ ತ್ಯಾಗಯ್ಯನವರು.

'ಕಲಲ-ನೇರ್ಚಿನ ಮುನಿಜೆ ಸಿನದಿಗಾದಿ ಏಮಿ' (ಅರವತ್ತು ನಾಲ್ಕು ಕಳೆಗಳಲ್ಲೂ ಪರಿ ಣತನಾದರೂ ಮುನ್ನ ತಾ ಪಡೆದಷ್ಟೆ) ಎಂಬ ಕೃತಿಯಲ್ಲಿ ಹಾನಿ ವೃದ್ಧಿಗಳೆರಡೂ ಭಗ ದಿಚ್ಛೆಯೇ, ಎಷ್ಟು ವಿದ್ಯೆಗಳನ್ನು ಕಲಿತರೂ ಅದು ಹೊಟ್ಟೆ ಪಾಡಿಗೆ ಮಾತ್ರ. ಭಗವತ್ಕ ಟಾಕ್ಷ ಪ್ರಾಪ್ತವಾಗ ಬೇಕಾದರೆ ಅವನ ಕರುಣೆಯಿಂದ ಮಾತ್ರ ಸಾಧ್ಯ, ಎಂದು ಹೇಳುತ್ತ ಎರಡು ಸಂದರ್ಭಗಳನ್ನು ಹೇಳುತ್ತಾರೆ. ರಾವಣನ ತಮ್ಮನಾದ ವಿಭೀಷಣ ನಿಗೆ, ಯುದ್ಧಾನಂತರ ಅವನು ಅಯೋಧ್ಯೆಗೆ ಬಂದು ಹಿಂತಿರುಗುವಾಗ, ಶ್ರೀರಾಮನು ತನ್ನ ವಂಶದ ಹಿಂದಿನವರೆಲ್ಲ ತಾನೂ ಸಹ ಪೂಜೆಮಾಡುತ್ತಿದ್ದ ಶ್ರೀರಂಗನಾಥನ ಮೂರ್ತಿಯನ್ನು ದಯಪಾಲಿಸುತ್ತಾನೆ. ಆದರೆ ಅವನು ಆ ಮೂರ್ತಿಯೊಡನೆ ದಕ್ಷಿಣಾ ಭಿಮುಖವಾಗಿ ಪ್ರಯಾಣ ಮಾಡುವಾಗ ದೈವೇಚ್ಛೆಯಂತೆ ಅದನ್ನು ಶ್ರೀರಂಗಕ್ಷೇತ್ರ ದಲ್ಲಿಯೇ ಬಿಟ್ಟು ಲಂಕೆಗೆ ಹೋಗಬೇಕಾಗುತ್ತದೆ. ಲಂಕೆಗೆ ತೆಗೆದುಕೊಂಡು ಹೋಗಲು ಆಗುವುದಿಲ್ಲ. ಈ ಕಥೆ ಎಲ್ಲರಿಗೂ ತಿಳಿದುದೇ. ಆದರೆ ತ್ಯಾಗರಾಜರು ಸಿಂಗರಿ ಮುನಿಯ ಕಥೆಯೊಂದನ್ನು ಹೇಳುತ್ತಾರೆ. ಸಿಂಗರಿ ಮುನಿಯೆಂಬ ಒಬ್ಬ ಬಡ ಬ್ರಾಹ್ಮಣ, ಸರಳ ಜೀವಿಯಾಗಿ ಅಯೋಧ್ಯೆಯಲ್ಲಿ ವಾಸವಾಗಿದ್ದು ತಪೋನಿರತನಾಗಿರುತ್ತಾನೆ. ರಾಮ ಪಟ್ಟಾಭಿಷೇಕ ಸಮಯದಲ್ಲಿ ಶಾಂತ್ಯರ್ಥವಾಗಿ ಅನೇಕ ದಾನ ಧರ್ಮಗಳನ್ನು ಮಾಡು ತ್ತಾರೆ. ಆದರೆ ತಿಲದಾನ ಸ್ವೀಕರಿಸಲು ಯಾರೂಮುಂದೆ ಬರುವುದಿಲ್ಲ. ಇದಕ್ಕಾಗಿ ಅಪಾರವಾದ ಐಶ್ವರ್ಯದ ಆಮಿಷ ಒಡ್ಡುತ್ತಾರೆ. ಇದಕ್ಕೆ ಬಲಿಬಿದ್ದ ಬಡವ ಸಿಂಗರಿಮುನಿ ತಾನು ಸಾಕ್ಷಾತ್ ಪರಬ್ರಹ್ಮವೇ ಆದ ಶ್ರೀರಾಮನಿಂದಲೇ ದಾನವನ್ನು ಸ್ವೀಕರಿಸುವುದ ರಿಂದ ಅವನ ದರ್ಶನವನ್ನೂ ಪಡೆದು ತಿಲದಾನ ಸ್ವೀಕಾರದ ಪಾಪವನ್ನೂ ಕೂಡಲೇ ಕಳೆದುಕೊಳ್ಳಬಹುದೆಂಬ ಎಣಿಕೆಯಿಂದ ದಾನಸ್ವೀಕಾರಮಾಡುತ್ತಾನೆ ಆದರೆ ಒಡನೆ ರಾಮದರ್ಶನವಾಗುವಂತೆ ರಾಮನ ಮತ್ತು ಮುನಿಯ ನಡುವೆ ಒಂದು ತೆರೆ ಬಿದ್ದು ಬಿಡುತ್ತದೆ. ಮುನಿಯ ಮುಖ ಕಳಾಹೀನವಾಗುತ್ತದೆ. ತೇಜಸ್ಸು ಅಳಿಯುತ್ತದೆ ಮುಮ್ಮಲ ಮರುಗುತ್ತ ರಾಮದರ್ಶನಕ್ಕಾಗಿ ಕಾದು ಕೆಲಕಾಲದ ನಂತರ ದರ್ಶನ ಪಡೆದು ಕೃತಾರ್ಥನಾಗುತ್ತಾನೆ. ಮುನಿಯ ಮುಖ ಮತ್ತೆ ವರ್ಚಸ್ವಿಯಾಗಿ ತೇಜಸ್ವಿಯಾಗಿ ಬೆಳಗುತ್ತದೆ. ಮತ್ತೆ ಆ ಮುನಿ ಮಾತ್ರ ಆ ಐಶ್ವರ್ಯವನ್ನು ಅನುಭವಿಸುವುದಿಲ್ಲ.

ಇಂಥ ಹಲವು ಸನ್ನಿವೇಶಗಳು ಶ್ರೀತ್ಯಾಗರಾಜ ಕೃತಿಗಳಲ್ಲಿ ಕಾಣಸಿಗುತ್ತವೆ. ಇವೆಲ್ಲ ಅವರ ಧ್ಯಾನದ ಮಹಿಮೆ ಮತ್ತು ಅವರ ಅಪೂರ್ವ ಕಲ್ಪನಾಶಕ್ತಿಗೆ ಸಾಕ್ಷಿ ಯಾಗಿವೆ

ಪದಗಳನ್ನು ಅವರು ಹುಡುಕದೆ ಶಾರದೆಯೇ ಅವರಲ್ಲಿ ನಿಂತು ನಲಿಯುತ್ತ ರಮ್ಯವಾದ ಪದಜಾಲಗಳನ್ನು ನೀಡುತ್ತಿದ್ದಳೇನೋ!

ವಂದನಮು ರಘುನಂದನ, ಸೇತು ಬಂಧನಾ ಭಕ್ತಿಚಂದನ–ರಾಮ
ಶ್ರೀರಾಮಾ, ನಾತೋ ವಾದಮಾ, ನೇ ಭೇದಮಾ, ಇದಿ ಮೋದಮಾ?
ಶ್ರೀರಾಮಾ ಹೃಚ್ಚಾರಮಾ, ಬ್ರೋವಭಾರಮಾ, ರಾಯಭಾರಮಾ?
ಏಂಟೆನಿ, ನಮ್ಮುಕೊಂಟೆನಿ, ಶರಣಂಟೆನಿ, ರಮ್ಮಂಟೆನಿ
ಓಡನು, ಭಕ್ತಿ ವೀಡನು, ಬರುಲನೇಡನು, ನೀವಾಡನು
ಕಮ್ಮನಿ ವಿಡಮುಮ್ಮನಿ ವರಮು ಕೊಮ್ಮನಿ ಪಲುಕರಮ್ಮನಿ
ನ್ಯಾಯಮಾ, ನೀಕಾದಾಯಮಾ, ಇಂತ ಹೇಯಮಾ ಮುನಿಗೇಯಮಾ?
ಕ್ಷೇಮಮು, ದಿವ್ಯಧಾಮಮು, ನಿತ್ಯನೇಮಮು, ರಾಮನಾಮಮು
ವೇಗರಾ, ಕರುಣಾಸಾಗರ, ಶ್ರೀತ್ಯಾಗರಾಜ ಹೃದಯಾಗಾರ, ರಾಮ

'ಗ್ರಹಬಲಮೇಮಿ' ಎಂಬ ಕೃತಿಯಲ್ಲಿ ಗ್ರಹ, ರಾಮಾನುಗ್ರಹ, ತೇಜೋಮಯ ವಿಗ್ರಹ, ನವಗ್ರಹ, ಗ್ರಹಪೀಡ, ಆಗ್ರಹ, ನಿಗ್ರಹ ಇತ್ಯಾದಿ ಪದಗಳು ಉತ್ತಮ ಸಾಹಿತ್ಯವಾಗಿ ಅರ್ಥಗರ್ಭಿತವಾಗಿ ರಂಜಿಸುತ್ತಿವೆ ಇಂಥವು ಅನೇಕವಿವೆ, ಇದೊಂದು ನಿದರ್ಶನ, ಅಷ್ಟೆ.

ಉಪನಿಷತ್ತುಗಳು, ಭಗವದ್ಗೀತೆ, ಧರ್ಮಗ್ರಂಥಗಳು, ಶ್ರೀಮದ್ರಾಮಾಯಣ ಭಾಗವತಾದಿಗಳು ಮುಂತಾದುವುಗಳಲ್ಲಿರುವ ಗಹನವಾದ ವಿಚಾರಗಳು ತ್ಯಾಗರಾಜ ಕೃತಿಗಳಲ್ಲಿ ಸರಳವಾದ ಸಂಗೀತದ ಮೂಲಕ ಗೋಚರಿಸಿವೆ.

ಶ್ರೀತ್ಯಾಗರಾಜ ಸ್ವಾಮಿಗಳು ವಿನೋದ ಪ್ರಿಯರೂ ಹೌದು, ಸ್ವಾರಸ್ಯವಾದ ನಾಣ್ಣುಡಿಗಳು ಇವರ ಸಾಹಿತ್ಯದಲ್ಲಿ ಹೊರಹೊಮ್ಮಿವೆ. ದುತ್ತಪಾಲ ರುಚಿದೆಲಿಯುನಾ (ಪಾತ್ರೆಗೆ ಹಾಲಿನರುಚಿ ತಿಳಿದೀತೆ?) ಚೆವಿಟಿಕಿ ಉಪದೇಶಿಂಚಿನಟುಗಾದೊ' (ಕಿವುಡನಿಗೆ ಉಪದೇಶಮಾಡಿದಂತೆ) ಇತ್ಯಾದಿ.

"Men aim right when they shoot in jest" ಎಂದು ಡ್ರೈಡನ್ ಕವಿ ಹೇಳುವಂತೆ jest (ಪರಿಹಾಸ್ಯ) ಅಥವಾ Satire (ವಿಡಂಬನೆ) ಮಾದರಿಗಳೂ ಇಲ್ಲಿವೆ:

ಕೊಕ್ಕಶಾಸ್ತ್ರವಿದುಲು ನರ ಸನ್ನುತಿಚೇ
ಗೊಪ್ಪ ಬಹುಮತುಲ ನಂದೆದರಯ್ಯ
ಚಕ್ಕಗಾನು ಭಕ್ತಿ ಶಾಸ್ತ್ರವಿದುಲ
ಚಾಲಗನಿ ನವ್ವೆದರು, ತ್ಯಾಗರಾಜನುತ
ಧರಲೋನ ನೀ ನಿಜದಾಸುಲನು ಕಂ
ದರ್ಪಕಾದುಲ ನಿಜ ದಾಸುಲನು
ಸರಿಜೇಸಿ ವೇಡುಕ ಜೂಚಿದಿದಿ, ಸಾಕೇತ ರಾಮ, ನ್ಯಾಯಮಾ ?

(ಸಮಾಜದಲ್ಲಿ ಕೊಕ್ಕಶಾಸ್ತ್ರ ತಿಳಿದವರು ನರಸನ್ನುತಿಯನ್ನೂ ಬಹುಮಾನಗಳನ್ನೂ ಪಡೆಯುತ್ತಾರೆ. ಆದರೆ ಭಕ್ತಿಶಾಸ್ತ್ರ ತಿಳಿದವರು ಅಪಹಾಸ್ಯಕ್ಕೆ ಗುರಿಯಾಗುತ್ತಾರೆ. ಸಾಕೇತರಾಮ, ನಿನ್ನ ದಾಸರನ್ನೂ ಮನ್ಮಥನ ದಾಸರನ್ನೂ ನೀನೂ ಸಹ ಒಂದೇ ಮಾಡುವುದು ನ್ಯಾಯವೇ ?)

ತವಿಟಿಕಿ ರಂಕಾಡವೋವ, ಕೂಟಿ
ತಪೆಲ ಕೋತಿ ಗೊಂಪೋಯಿನಟುಗಾದೊ ?

(ಅಲ್ಪ ಲಾಭಕ್ಕಾಗಿ ನೀಚವೃತ್ತಿಗಿಳಿದು ವ್ಯವಹರಿಸುವಾಗ ಕೂಳಿನ ತಪ್ಪಲೆಯನ್ನು ಕೋತಿ ಕೊಂಡೊಯ್ದಂತೆ)

ಅಲಂಕಾರಗಳು ಈ ಕೃತಿಗಳಲ್ಲಿ ರಮಣೀಯವಾಗಿಯೂ ಸೂಕ್ತವಾಗಿಯೂ ಪ್ರಯೋಗಿಸಲ್ಪಟ್ಟಿವೆ:

ದಿವಟಿಕಿ ದೀಪಮುರೀತಿ, ಕಾವೇಟಿಕಿ ಕಾಲುವಲ ರೀತಿ

(ದಿನಲಕ್ಷ್ಮಿಯ ಮುಂದಿನ ದೀಪದಂತೆ, ಕಾವೇರಿಯ ನೆರೆಯ ಕಾಲುವೆಯಂತೆ)

ಇತರ ದೈವಗಳು ಇಷ್ಟದೈವಕ್ಕೆ ಸಮಾನವಾಗಲಾರವು ಎಂಬ ಹೋಲಿಕೆ ಸೊಗಸಾಗಿದೆ.

'ಸಾರಿ ವೆಡಲಿನ ಈ ಕಾವೇರಿನಿ ಜೂಡರೇ' ಎಂಬ ಕೃತಿಯಲ್ಲಿ ಕಾವೇರೀನದಿಯ ಸುಂದರವಾದ ವರ್ಣನೆಯಿದೆ– ಅವರಿವರೆನ್ನದೆ ಎಲ್ಲರಿಗೂ ಸಮೃದ್ಧ ಫಲಗಳನ್ನೂ ಅಭೀಷ್ಟಗಳನ್ನೂ ಕೊಡುತ್ತಾ, ಕೆಲವೆಡೆ ದುರವಾಗಿ, ಕೆಲವೆಡೆ ಗರ್ಜನಭೀಕರವಾಗಿ ತುಂಬಿದ ಕರುಣೆಯಿಂದ ನಿರತವಾಗಿ ಕೆಲವು ತಾವುಗಳಲ್ಲಿ ಈ ಕಾವೇರಿ ಕನ್ಯಕಾಮಣಿ ಲೀಲೆಯಿಂದ ಸಂಚರಿಸುತ್ತಾಳೆ. ಕಾವೇರೀತೀರದಲ್ಲಿ ಕೋಗಿಲೆಗಳು ಮುದದಿಂದ ಉಲಿಯುತ್ತಿವೆ. ಶ್ರೀರಂಗನಾಥನ ದರ್ಶನವನ್ನು ಮಾಡಿ, ಹದಿನಾಲ್ಕು ಲೋಕಗಳಿಗೂ ಜೀವದಾನ ಮಾಡುತ್ತ, ಪಂಚನದೀಶ್ವರನ ದರ್ಶನಕ್ಕೆ ಹೊರಡುತ್ತಾಳೆ, ರಾಜರಾಜೇಶ್ವರಿ ಎಂದು ಸ್ತುತಿಸುತ್ತ ಭೂಸುರರು ಎರಡು ದಡಗಳಿಂದಲೂ ಹೂಗಳಿಂದ ಪೂಜಿಸುತ್ತಿರಲು, ಹರಿಯುತ್ತಿರುವ ಕಾವೇರಿಯನ್ನು ಎಲ್ಲರೂ ಕಣ್ತುಂಬ ನೋಡಿರಿ.

ಈ ಬಗೆಯ ಕವಿತಾ ಚಮತ್ಕಾರಗಳು, ವರ್ಣನೆಗಳು, ಉಪಮಾಗಿ ಅಲಂಕಾರಗಳು ನವರಸಪೂರಿತ ನವವಿಧ ಭಕ್ತಿಯುತ ಕೃತಿಗಳೆಲ್ಲವೂ ಭಗವದರ್ಪಣವಾಗಿವೆ. ಸುಸಮಾಜ ಧಾರಣೆ ಮಾಡುವ ಗುರಿಯಿಂದಲೇ ಅನೇಕ ಕೃತಿಗಳು ರಚಿತವಾಗಿವೆ. ಇವು ನೇರವಾಗಿ ನೀತಿಬೋಧಕವಾಗಿಯೂ, ಕೆಲವು ವೇಳೆ ಹಾಸ್ಯರೂಪವಾಗಿಯೂ, ಕೆಲವುವೇಳೆ ಅಲಂಕಾರಪೂರ್ವಕವಾಗಿ ಮನಸ್ಸಿಗೆ ನಾಟುವಂತಿವೆ.

ತ್ಯಾಗರಾಜರ ಕಲ್ಪನೆಯ ಕಲಶವೆಂದರೆ ಶ್ರೀರಾಮ, ಶ್ರೀರಾಮನೆಂದರೂ ಒಂದೇ, ಪರಬ್ರಹ್ಮನೆಂದರೂ ಒಂದೇ. 'ರಾಮಾ ಯನ ಬ್ರಹ್ಮಮುನಕು ಪೇರು'. ಇತರ ದೈವಗಳಿಂದೇನು ಪ್ರಯೋಜನ? ವಾಲ್ಮೀಕ್ಯಾದಿ ಮುನಿಗಳೂ, ಮಹಾತ್ಮರನೇಕರೂ ಅವನ ಗುಣಗಳನ್ನು ವರ್ಣಿಸಿದರು ಉತ್ತಮವಾದ ಕಾವ್ಯಗಳನ್ನು ರಚಿಸಿದರು... ಆದರೆ ನನ್ನ ಆಸೆಯೂ ತೀರಬೇಕಲ್ಲವೇ. ನನ್ನ ಜನ್ಮದ ರಹಸ್ಯವೇ ಶ್ರೀರಾಮ ಮಹಿಮೆಯ ವರ್ಣನೆ. ಅವನ ಸಂಕಲ್ಪದ ಮುಂದೆ ಮಾನವನ ಸಾಮರ್ಥ್ಯವೇನಿದೆ? ಯಾರ ಪಾಂಡಿತ್ಯವೇ ಆದರೂ ಏನು ನಡೆದೀತು! ಅವನು ಸಾಕೇತರಾಜನಾಗಿ ಅವತರಿಸಿದರೂ ವಿಶ್ವವೆಂಬ ರಥವನ್ನು ಹತ್ತಿ ತನ್ನದೇ ಆದ ಸಾಮರ್ಥ್ಯದಿಂದ ತಾನೇ ಅದನ್ನು ನಡೆಸುತ್ತಿದ್ದಾನೆ. ಅವನು ದುಷ್ಟದನುಜ–ಮದವಿದಾರ, ಶಿಷ್ಟಜನ ಹೃದಯ ವಿಹಾರ, ಅವನೇ ಇಷ್ಟದೈವ. ಅವನ ಬಾಣದ ತ್ರಾಣವೂ ಶೌರ್ಯವೂ ಹೇಳಲಳವಲ್ಲ. ಸ್ವಾಮಿ ಸಮರೈಕಶೂರ, ಶರಧಿಮದವಿದಾರ, ರಾವಣನ ಮೂಲಬಲವೆಂಬ ಹತ್ತಿಯ ಬೆಟ್ಟಗಳಿಗೆ ಹಚ್ಚಿದ ಕಿಚ್ಚು. ಪಾಪವನಗಳಿಗೆಲ್ಲ ಕುಠಾರ. ಅಗಾಧವಾದ ಧನುರ್ಭಂಗ ಮಾಡಿದ ಕೀರ್ತಿ ಈ ರಘುಕುಲವರನದೇ. ಪ್ರಭು ಯಾಂತ, ಭ್ರಾಂತ, ನಿಶಾಂತ, ಸೃಷ್ಟಿ, ಪುಷ್ಟಿ, ಲಯಗಳೆಂಬ ಮೂರು ಸಾಧಾರಣ ದಿನಚರಿಗಳನ್ನು ತ್ರಿಮೂರ್ತಿಗಳಿಗೆ ಕೊಟ್ಟು, ತುಷ್ಟರಾದ ಸದ್ಭಕ್ತರ ಮನೋಭೀಷ್ಟವನ್ನು ಕೊಡುತ್ತಾನೆ. ಇವನ ಮನಸ್ಸು, ಇವನ ಸೊಗಸು, ಇವನ ದಿನಸು ಬೇರೆಯೇ. ಈ ಲಾವಣ್ಯರಾಮ ಎಲ್ಲ ದೇವರುಗಳಂತಲ್ಲ. ನನ್ನ ಮನವನ್ನರಿತು ಪೊರೆದರೂ ತೊರೆದರೂ ಅವನೇ ನನಗೆ ಗತಿ, ಅವನ ವಿನಾ ನನ್ನ ಮನ ಎಲ್ಲಿಯೂ ನಿಲ್ಲದು. ಯಶ, ಆಯು, ಸದ್ಭಕ್ತಿ, ಏಕಾಂತಚಿತ್ತ, ಸುಶರೀರ ಎಲ್ಲವನ್ನೂ ನೀಡುವ ಭಾಸುರ ಶ್ರೀರಾಮ. ಅವನ ತತ್ತ್ವಗಳನ್ನರಿತು ಅವನ ನಾಮವನ್ನು ಜಪಿಸಬೇಕು. 'ತತ್ತ್ವಮಸಿ' ಎಂಬ ವಾಕ್ಯಾರ್ಥ ಶ್ರೀರಾಮನೇ.

ರಾಮಭಕ್ತಿ ತ್ಯಾಗಯ್ಯನವರಿಗೆ ಜನ್ಮದಿಂದಲೇ ಲಭಿಸಿದ ಭಾಗ್ಯ. 'ಪುಟ್ಟಿನ ನಾಡೇ ನಿಜಭಕ್ತಿನಿ ಮೆಡಗಟ್ಟಿ' ಹುಟ್ಟಿದಂದೇ ರಾಮ ಇವರ ಕತ್ತಿಗೆ ರಾಮಭಕ್ತಿಯನ್ನು ಕಟ್ಟಿದ. 'ಚಿನ್ನನಾಡೆ ನಾ ಚೆಯಿಪಟ್ಟಿತಿವಿ' ಚಿಕ್ಕಂದಿನಲ್ಲಿಯೇ ಇವರ

ಕೈಹಿಡಿದ. 'ಚಿನ್ನನಾಡಾದಿಗ ಚಿತ್ತಮಂದು ನೆಲಕೊನ್ನವಾಡು' ಚಿಕ್ಕಂದಿನಿಂದಲೇ ಇವರ ಮನಮಂದಿರವನ್ನು ಆಕ್ರಮಿಸಿದ. 'ಎಡಾದಿನಾಡಿಗ ಎಡಬಾಯನಿವಾನಿ ವೋಡಿಮಿಗ ಕಾಪಾಡುದುನು' ಒಂದು ವರುಷದ ಹಸುಗೂಸನ್ನು ರಕ್ಷಿಸುವಂತೆ ಕಾಪಾಡುತ್ತಾನೆ. 'ತಲಕುವಚ್ಚಿನ ಬಾಧ ತಲಪಾಗಕು ಚೀಟು' ತಲೆಗೆ ಬಂದ ಅಪಾಯವು ತಲೆಯ ಪಾಗಿನಲ್ಲಿಯೇ ಕಳೆದು ಹೋಗುವಂತೆ ಮಾಡುವುದಾಗಿ ಸ್ವಾಮಿಯ ವಾಗ್ದಾನ ಇವರಿಗೆ. ಇದೇ ಭಾಗ್ಯಮುಗಾಕ ಏಮಿಯುನ್ನದಿರಾ ?– ಇದೇ ಭಾಗ್ಯವಲ್ಲದೆ ಬೇರೆ ಏನಿದೆ ?

ಸಂಗೀತೋಪಾಸನೆ, ನಾದೋಪಾಸನೆ, ಧ್ಯಾನ, ಪೂಜಾವಿಧಿ, ಕೃತಿರಚನೆ ಕೃತಿಯಲಕ್ಷಣ, ಪರಬ್ರಹ್ಮೋಪಾಸನೆ, ಬ್ರಹ್ಮಾನುಭವ, ಲೋಕರೀತಿ, ಲೋಕನೀತಿ ಮುಂತಾಗಿ ಹಲವಾರು ಮುಖಗಳಲ್ಲಿ ಹರಿದು ಮಾನವಕುಲಕ್ಕೆ ಶ್ರೇಯಸ್ಸನ್ನುಂಟು ಮಾಡಿವೆ, ಇದುವರೆಗೆ ದೊರೆತಿರುವ ಸುಮಾರು ಏಳುನೂರು ಕೃತಿಗಳು. ಇವುಗಳ ತತ್ತ್ವಗಳನ್ನೂ ಅರ್ಥಗಳನ್ನೂ ಅರಿತು ಬಳಸಿದರೆ ಗಾಯಕರೂ ಶ್ರೋತೃಗಳೂ ಹೆಚ್ಚು ಫಲ ಪಡೆಯಬಹುದು. ಚಿಂತನ ಶೀಲರಿಗೆ ವಿಚಾರವಂತರಿಗೆ ಹೇರಳವಾದ ಅವಕಾಶಗಳಿವೆ ಇಲ್ಲಿ.

ಪಾಪಮಿದು, ಪುಣ್ಯಮಿದು, ಹಿತರೂಪಮಿದು, ಅಹಿತಪ್ರಕಾರಮಿದು, ದುಃ
ಖೋಪಾತ್ತಮಿದು ಎಂದರಿಪುಗುಂ ಆ ಪರಮಕವಿಪ್ರಧಾನರಾ ಕಾವ್ಯಂಗಳ್
—ನೃಪತುಂಗ

ಆದರೂ,

ಎನಿತನೊರಲ್ದು ಪೇಳ್ವಕವಿ ಏವನದಂ। ಪೆಸರ್ಚಿಟ್ಟು ಮೆಚ್ಚು ಬ।
ಲ್ಲನನರಸಲ್ಕೆ ವೇಳ್ಪುದು..............................
....................ಕಟ್ಟಿಯು ಮೇನೊ ಮಾಲೆಗಾ।
ರಂ ಪೊಸಬಾಸಿಗಂ ಮುಡಿವಭೋಗಿಗಳಲ್ಲದೆ ಬಾಡಿಪೋಗದೇ ?

ಕವಿ ಪ್ರಧಾನರ ಕಾವ್ಯಗಳಲ್ಲಿ ಜೀವನ ಉದ್ಧಾರಕ್ಕೆ ಅಗತ್ಯವಾದ ಎಲ್ಲ ಎಚ್ಚರಿಕೆ ಯನ್ನೂ ನೀಡಲಾಗಿದೆ. ಆದರೂ ಕವಿ ಎಷ್ಟೇ ಹೇಳಲಿ, ಅದನ್ನು ಕಂಡು, ಕೇಳಿ, ಮೆಚ್ಚಿ ಸುಖಪಡಬಲ್ಲವರೂ ಬೇಕು. ಇಲ್ಲದಿದ್ದರೆ ಕವಿಯ ಶ್ರಮವೆಲ್ಲ ಮುಡಿಯುವವ ರಿಲ್ಲದೆ ಕಟ್ಟಿದ ದಂಡೆಯಂತೆ ವ್ಯರ್ಥವಾಗುತ್ತದೆ.

ತ್ಯಾಗರಾಜ ಕೃತಿಗಳ ಅವಲೋಕನವು ಭಗವದ್ದರ್ಶನ ಮಾಡಿದಂತೆ. ಯಾವ ದೃಷ್ಟಿಕೋಣದಿಂದ ನೋಡಿದರೂ ಸೌಂದರ್ಯ ಗೋಚರಿಸುತ್ತದೆ. ಇಲ್ಲಿ ಏನಿದೆ ಎಂದು ಅರಸುವ ಬದಲು 'ಏನಿಲ್ಲ ಇಲ್ಲಿ ?' ಎಂಬ ಭರವಸೆಯಿಂದ ಆ ಸಮೃದ್ಧಿಗೆ ಕೈ ಹಾಕ ಬೇಕು. ಇದನ್ನು ಕುರಿತು ಹೀಗೆಯೇ ಬರೆಯುತ್ತ ಹೋದರೆ ಇದಕ್ಕೆ ಕೊನೆಯೆಲ್ಲಿ ? ಮೂಗಿಗಿಂತ ಮೂಗುತಿ ಭಾರವಾದೀತು.

ಕೆಲವು ಶೀರ್ಷಿಕೆಗಳಡಿಯಲ್ಲಿ ಶ್ರೀ ತ್ಯಾಗರಾಜ ಸ್ವಾಮಿಗಳ ಕೃತಿಗಳನ್ನು ಕಾಣುವ ಒಂದು ವಿಶೇಷ ಮಾರ್ಗ. ಭಗವದನುಭವಕ್ಕೆ. ಇದನ್ನು ಸಾಧಿಸಲು ಬ್ರಹ್ಮರಂಧ್ರನಾಡಿಯಲ್ಲಿ ಪ್ರಧಾನಸ್ಥಳಗಳಾದ ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾ, ಸಹಸ್ರಾರಚಕ್ರಗಳ ಮೂಲಕ ಹಾದು ಹೋಗಬೇಕು. ತಿರುಮಲೆಯ ಏಳು ಬೆಟ್ಟಗಳನ್ನೂ ಏರಿದರೆ ತಾನೆ ಸಹಸ್ರಾರ ದಲ್ಲಿ ಬ್ರಹ್ಮಾನುಭವ ಪಡೆದಂತೆ ಶ್ರೀನಿವಾಸನ ದರ್ಶನ ಲಭಿಸುವುದು ? ಈ ಹೋಲಿಕೆ ಯನ್ನು ಮನಸ್ಸಿನಲ್ಲಿಟ್ಟು ಶ್ರೀ ತ್ಯಾಗರಾಜರು ಶ್ರೀ ವೆಂಕಟೇಶನ ದರ್ಶನ ಮಾಡಿದ ವೈಭವವನ್ನು ಕಾಣಲಾಗಿದೆ.

'ಗುರುಲೇಕ ಎಟುವಂಟಿ ಗುಣಿಕಿ ತೆಲಿಯಗ ಬೋದು'

ಎಂಬಂತೆ ಗುರುಹಿರಿಯರ ಪೂಜ್ಯರ ಮಾರ್ಗದರ್ಶನವಿಲ್ಲದೆ ಜ್ಞಾನೋದಯವಾಗುವು ದಿಲ್ಲ. ಇಂಥ ಹಿರಿಯರನ್ನು ತ್ಯಾಗಯ್ಯನವರು 'ಪೆದ್ದಲು' ಎಂದು ಗೌರವಿಸಿ ಅವರನ್ನು ಹಲವು ಕೃತಿಗಳಲ್ಲಿ ಕಾಣುತ್ತಾರೆ. ಅವರ ನಡೆನುಡಿಗಳನ್ನು ಅನುಸರಿಸಿದ್ದಾರೆ.

ಒಮ್ಮೆ ಗೆಳೆಯರೊಬ್ಬರು ತ್ಯಾಗರಾಜ ಕೃತಿಯೊಂದರ ಭಾವವನ್ನು ಗಮನಿಸಿ ದೇವರು ಎಲ್ಲಿದ್ದಾನೆ ಎಂಬ ಪ್ರಶ್ನೆಗೆ ಉತ್ತರವಲ್ಲವೆ ? ಎಂದು ಕೇಳಿದರು. ಇದು ಚಿಂತನೆಗೆ ಸ್ವಲ್ಪ ಪುಟಕೊಟ್ಟಿತು. ಹಲವು ಕೃತಿಗಳಲ್ಲಿ ತ್ಯಾಗಯ್ಯನವರು ಭಗವಂತನ ಸರ್ವಾಂತರ್ಯಾಮಿತ್ವವನ್ನು ಸಾರಿ ಹೇಳಿ, ಈ ವಿಚಾರವನ್ನು ಸಾಧಿಸಿರುವುದನ್ನೂ ಸ್ಥಾಪಿಸಿರುವುದನ್ನೂ ಗಮನಿಸಬಹುದು.

ಪೂಜೆ ಹಲವು ವಿಧ. ಎಲ್ಲ ವಿಧಗಳೂ ಸ್ವಾಮಿಯನ್ನು ಕುರಿತೇ, ಅವನನ್ನು ಮೆಚ್ಚಿಸುವುದಕ್ಕಾಗಿಯೇ. ಆದರೆ, 'ದೇವ ಬೊಂಬೆ, ಪೂಜೆ ಆಟ, ಭಕ್ತಿ ಸೋಜಿಗ' ಈ ಭಕ್ತಿ ಒಲಿಯುವುದಕ್ಕಾಗಿಯೇ ಪೂಜೆ, ಭಕ್ತಿಯಿದ್ದರೆ ಪೂಜೆಗೆ ಬೆಲೆ ಇದನ್ನು ತ್ಯಾಗರಾಜ ಕೃತಿಗಳಲ್ಲಿ ಕಂಡಂತೆ ನಿರೂಪಿಸಲಾಗಿದೆ.

ಪೂಜೆ ಮತ್ತು ಭಕ್ತಿಗಳು ಕೈಹಿಡಿದೇ ಸಾಗಬೇಕು. ಭಕ್ತಿಯಿಂದ ಪೂಜಿಸಬೇಕು ಅಥವಾ ಪೂಜೆಯ ಫಲ ಭಕ್ತಿ. ಪೂಜೆಯು ಕ್ರಿಯೆಯಾದರೆ ಭಕ್ತಿಯು ಅದನ್ನು ಬೆಳಗುವ ಭಾವ. 'ಭಾವವಿಲ್ಲದ ಭಕುತಿ ಕುಹಕ ಯುಕುತಿ'. ಭಕ್ತಿಯನ್ನು ಕುರಿತು ತ್ಯಾಗರಾಜ ಕೃತಿಗಳನ್ನು ಗಮನಿಸಲಾಗಿದೆ.

ತ್ಯಾಗರಾಜರು ನಾದೋಪಾಸಕರು ಭಗವಂತನನ್ನು, ಪರಬ್ರಹ್ಮವನ್ನು ನಾದರೂಪದಲ್ಲೇ ಕಂಡವರು, ನಾದಭರಿತವಾಗಿ ಹಾಡಿದವರು. ತಮ್ಮ ವಾಕ್ಕೇಲಿ ದಿಂದ ನಾದಬ್ರಹ್ಮನಾದ ರಾಮನನ್ನು ಸಿಂಗರಿಸಿ ನಾದೋಪಾಸನೆ ಮಾಡಿದರು.

ಇದೇ ರೀತಿಯಲ್ಲಿ ಸಂಗೀತೋಪಾಸನೆಯಿಂದ ರಂಜನೀಯವಾಗಿ ಗಾನಮಾಡಿ ರಾಗಾಧಿದೇವತೆಗಳು ನೃತ್ಯಮಾಡುತ್ತಿರಲು ಅವರ ಕಾಲಿನ ಮಂಜೀರಗಳ ಮಧುರ ಧ್ವನಿಯು ಮಹಿಮಾನುಭವವನ್ನು ಪಡೆದವರು.

ಶ್ರೀರಾಮ, ತ್ಯಾಗಯ್ಯನವರ ಒಂದು ವಿಶೇಷ ಕಲ್ಪನೆ. ಇವನು ತ್ರಿಮೂರ್ತಿಗಳಲ್ಲಿ ಯಾರೂ ಅಲ್ಲ. ಅವರೆಲ್ಲರಿಗೂ ಮೇಲಿರುವವನು. ಎಲ್ಲ ದೇವರುಗಳೂ ಶ್ರೀರಾಮನ ಆಜ್ಞಾನುವರ್ತಿಗಳು. ಎಲ್ಲ ದೇವರುಗಳನ್ನೂ ಒಳಗೊಂಡಿರುವವನ ಶ್ರೀ ರಾಮ. ಅವನು ದಶರಥರಾಮನೂ ಹೌದು, ಪರಬ್ರಹ್ಮವೂ ಹೌದು. ಯಾವ ಪರದೈವವನ್ನೇ ಕಂಡರೂ ಅವೆಲ್ಲ ತ್ಯಾಗಯ್ಯನವರಿಗೆ ಶ್ರೀರಾಮನಾಗಿಯೇ ಗೋಚರಿಸುತ್ತವೆ. ಎಲ್ಲ ದೈವಗಳಿಗೂ ಮೀರಿದ ಸ್ಥಾನದಲ್ಲಿ ತಮ್ಮ ರಾಮನನ್ನು ತಮ್ಮ ಹೃನ್ಮಂದಿರದಲ್ಲಿ ಕುಳ್ಳಿರಿಸಿ, ಧ್ಯಾನಿಸಿ, ಪೂಜಿಸಿ, ಅನುಭವಿಸಿ, ಅಲಂಕರಿಸಿ, ಆಲಿಂಗಿಸಿಕೊಂಡು ಚುಂಬಿಸಿ ಆನಂದಪಡುತ್ತಾರೆ. ಈ ಮಾರ್ಗದಿಂದಲೇ ಆತ್ಮಸಾಕ್ಷಾತ್ಕಾರ ಪಡೆದು ಬ್ರಹ್ಮದಲ್ಲಿ ಒಂದಾಗುತ್ತಾರೆ. ಅವರ ರಾಮನ ಕಲ್ಪನೆಯು ವಿವಿಧ ಕೃತಿಗಳೂ ಕುತೂಹಲಕರವಾಗಿ ಸೊಗಸಾಗಿವೆ.

ರಾಮ ಕತೆಯು, ರಾಮಕಥಾಸುಧಾರಸಪಾನದ ವೈಭವವೇ ಬೇರೆ.ವಾಲ್ಮೀಕ್ಯಾದಿಗಳು ವರ್ಣಿಸಿದ್ದೂ ಈ ರಾಮನನ್ನೇ. ಆದರೆ ತ್ಯಾಗಯ್ಯನವರಿಗೂ ರಾಮಕತೆಯು ಅನೇಕ ದರ್ಶನಗಳೂ, ಹಲವು ಸನ್ನಿವೇಶಗಳೂ ಪ್ರಕಟವಾಗಿವೆ. ಈ ರಾಮಕತೆಯನ್ನು ತ್ಯಾಗಯ್ಯನವರು ಆಸೆಪಟ್ಟು ಹೇಳಿ, ಅದನ್ನು ತಮ್ಮ ಬಾಳಿನ ಒಂದು ಗುರಿಯಾಗಿಯೇ ತಳೆದು ಕೃತಕೃತ್ಯತೆ ಪಡೆದಿದ್ದಾರೆ.

ವೈದೇಹಿ ಪೊಡವಿಯ ಮಗಳು, ವಿದೇಹರಾಜನ ಮಗಳು, ಮಣ್ಣಿನಮಗಳು. ಅವಳು ಮರಳಿದ್ದೂ ಮತ್ತೆ ಕಾಯಮಡಿಲಿಗೇ. ಆದರೆ ದೇಹಭಾವವನ್ನು ತೊರೆದು ವೈದೇಹಿಯಾಗಿ ಪರಮಾತ್ಮನಿಗೆ ತನ್ನನ್ನು ಸಮರ್ಪಿಸಿಕೊಂಡು 'ಸೋಹಂ' ಸ್ಥಿತಿಯನ್ನು ಪಡೆದವಳು. ಅವಳಿಗೆ ರಾಮನಲ್ಲಿದ್ದಂಥ ಪ್ರೇಮವನ್ನೇ, ಬೇಡುತ್ತಾರೆ ತ್ಯಾಗರಾಜರು. ಆಗತಾನೇ ಜೀವನಿಗೆ 'ಸೋಹಂ' ಸ್ಥಿತಿ ಪ್ರಾಪ್ತವಾದೀತು! ಇದು ಪ್ರೇಮ ಮಾರ್ಗದಿಂದ ಭಗವತ್ಸಾಕ್ಷಾತ್ಕಾರ.

ಇನ್ನು ದಾಸ್ಯಭಾವದಿಂದ ಬ್ರಹ್ಮ ಸಾಕ್ಷಾತ್ಕಾರ ಪಡೆದ ಮಹಾಮಹಿಮ ಆಂಜನೇಯ. ಇವನು ಎಲ್ಲ ಭಾವಗಳಲ್ಲೂ – ದೇಹಭಾವ, ಜೀವಭಾವ, ಆತ್ಮಭಾವಗಳಿಂದ ಭಗವಂತನನ್ನು ಒಲಿಸಿಕೊಂಡು ಸಾಧಿಸಿದ ಪೂಜನೀಯ.

ಶ್ರೀಕೃಷ್ಣ ಪರವಸ್ತುವಿನ ಇನ್ನೊಂದು ಮನೋಹರ ಅವತಾರ, ಆವಿಷ್ಕಾರ. ಆ ಪರವಸ್ತು ಸಾಕಾರವಾಗಿ ಗೋಚರಿಸಿದಾಗ ಮಾತ್ರವೇ ಇಂಥ ವೈಭವ ಪ್ರಕಟವಾಗುವುದು. The final touch of God's creation is animation ಎಂಬಂತೆ ಜಡವಸ್ತುವಾದ ಈ ಮಾನವ ದೇಹದಲ್ಲಿ ಅವನ ಶಕ್ತಿ ಪ್ರವೇಶವಾದರೆ ಇದು ಚಲಿಸಬಲ್ಲುದು. ಇದರ ಪ್ರತಿನಿಧಿಯೇ ಕೃಷ್ಣನ ಕೈಯ ಕೊಳಲು. ಜಡವಾದ ಆ ವಂಶಿಯಲ್ಲಿ ಸ್ವಾಮಿ ಉಸಿರುತುಂಬಿದಾಗ, ಅವನು ಅದನ್ನು ತನ್ನ ಕೈಯಲ್ಲಿಧರಿಸಿ ಅದರ ಮೇಲೆ ತನ್ನ ಅಂಗುಲಿ ಪಲ್ಲವಗಳನ್ನು ಆಡಿಸಿದಾಗ ಅದರಿಂದ ಮೃದುಮಧುರ ನಾದಗಳು ಹೊರಹೊಮ್ಮಿ ಲೋಕಗಳನ್ನೆಲ್ಲ ಉನ್ಮಾದಗೊಳಿಸುತ್ತದೆ. ಅವನು ಆಡಿಸಿದಂತೆ ಅದು ಆಡಬೇಕು. ಇಂಥ ವೇಣುಗಾನ ಲೋಲನನ್ನು ಕಾಣಲು ಸಾವಿರ ಕಣ್ಣುಗಳು ಬೇಕು.

ತ್ಯಾಗರಾಜ ಕೃತಿಗಳು ಇದೇ ರೀತಿಯಲ್ಲಿ ಎಲ್ಲ ದಿಕ್ಕುಗಳಲ್ಲಿಯೂ ತಮ್ಮ ಕೈಚಾಚಿ ಜೀವನದ, ಅಧ್ಯಾತ್ಮದ, ಇಹದ ಪರದ ಎಲ್ಲ ಕ್ಷೇತ್ರಗಳನ್ನೂ ಆವರಿಸಿಕೊಂಡಿವೆ.

---

ತ್ಯಾಗರಾಜರ ಕೃತಿಗಳ ಹಲವು ಮುಖಗಳು – ಮೈಸೂರಿನ ಶ್ರೀ ಎಸ್. ಎಸ್. ಮೂರ್ತಿ ಅವರು ಬರೆದಿರುವ ಕೃತಿ. ಸತ್ವರ ತಿ. ತಿ. ದೇವಸ್ಥಾನಗಳ ಪ್ರಕಟನೆಯಾಗಿ ಹೊರಬರಲಿರುವ ಸದರಿ ಕೃತಿಯ ಒಂದು ಭಾಗವಾದ ಈ ಲೇಖನವನ್ನು ಇಲ್ಲಿ ಉದ್ಧರಿಸಿ ನೀಡಲಾಗಿದೆ – ಸಂ –

---



# ಪ್ರಕಟನ ಶಾಖೆ

## ಕನ್ನಡ ವಿಭಾಗ

### ಶ್ರೀನಿವಾಸನ ಹಾಡುಗಳು ಭಾಗ–2

ಪುಟ: 10+104. ಬೆಲೆ: 4–50

ಹರಿದಾಸರಲ್ಲಿ ಹೆಸರಾಂತ ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರುಗಳು ತಿರುಮಲೆಯ ಸ್ವಾಮಿಯನ್ನು ಕುರಿತು ಹಾಡಿದ ಕೀರ್ತನೆಗಳ ಸಂಗ್ರಹ. ಡಾ॥ ಜಿ. ವರದರಾಜರಾವ್, ಕೊರಟಿ ಶ್ರೀನಿವಾಸರಾವ್, ಡಾ॥ ಟಿ. ಎನ್. ನಾಗರತ್ನ, ಬಿ. ಎಸ್. ಸರೋಜ ಅವರುಗಳು ಅನುಕ್ರಮವಾಗಿ ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರುಗಳ ಜೀವನ ವಿಶೇಷಗಳನ್ನು ಪರಿಚಯಿಸಿಕೊಟ್ಟಿದ್ದಾರೆ.

ಸಂಪಾದಕರು – ಶ್ರೀ ಕೆ. ಅಪ್ಪಣ್ಣಾ ಚಾರ್ಯ.

### ದಾಸಸಾಹಿತ್ಯದಲ್ಲಿ ಸೃಷ್ಟಿಪ್ರಕರಣ

ಪುಟ: 16+304+12 ಬೆಲೆ: 12–50

ಹರಿದಾಸ ಸಾಹಿತ್ಯದಲ್ಲಿ ಜೀವ, ಜಗತ್ತು, ವೈಕುಂಠ, ಪ್ರಳಯ, ಕಲ್ಪ, ಇತ್ಯಾದಿಗಳು ವಿಪುಲವಾಗಿ ವರ್ಣಿತವಾಗಿವೆ. ಭಾರತೀಯ ವೈದಿಕ ಸಾಹಿತ್ಯದಲ್ಲಿ ವಿವರಿಸಲಾಗಿರುವ ಸೃಷ್ಟಿಯ ಕ್ರಮ, ರೀತಿ, ನೀತಿಗಳನ್ನು ತಿಳಿಗನ್ನಡದಲ್ಲಿ ತಿಳಿಸುವ ಈ ಪುಸ್ತಕದಲ್ಲಿ ಲೇಖಕರೇ ಬರೆದ 24 ಸೃಷ್ಟಿಪ್ರಕರಣ ಚಿತ್ರಗಳಿವೆ. ಎಲ್ಲಕ್ಕೂ ಆಧಾರವಾಗಿರುವ ಹರಿದಾಸರ ಕೃತಿಗಳನ್ನೂ ಉದ್ಧರಿಸಿಕೊಡಲಾಗಿದೆ;

ಲೇಖಕರು: ಶ್ರೀ ವಿ. ಬಾದರಾಯಣ ಮೂರ್ತಿ

### ಪುರಂದರೋಪನಿಷತ್

ಪುಟ: 12+160 ಬೆಲೆ: 7–00

ಪುರಂದರದಾಸರು ಶ್ರೀನಿವಾಸನ ಬಗ್ಗೆ ಬರೆದ ಏಳು ಕೃತಿಗಳನ್ನು ತೆಗೆದುಕೊಂಡು ಅವುಗಳಲ್ಲಿ ತುಂಬಿರುವ ವೇದಾಂತದ ವಿಶ್ವರೂಪವನ್ನು ವಿವರಿಸಲಾಗಿದೆ. ದಾಸರ ಹಾಡುಗಳಿಗೆ ಶ್ರುತಿ, ಪುರಾಣಗಳು ಭಾಗವತ, ಭಾರತ, ರಾಮಾಯಣಗಳ ಆಧಾರಗಳನ್ನೂ ವಿವರಿಸಲಾಗಿದೆ. ಶ್ರೀನಿವಾಸನಲ್ಲಿ ಪುರಂದರರ ಅನಂತಭಕ್ತಿ, ಅವರ ಅಗಾಧ ಪಾಂಡಿತ್ಯ, ಸರಳತೆ, ಮೊದಲಾದ ಎಲ್ಲ ಶ್ರೇಷ್ಠ ಗುಣಗಳನ್ನೂ ವಿವರಿಸಲಾಗಿದೆ.

ವ್ಯಾಖ್ಯಾನಕಾರರು – ಶ್ರೀ ಬನ್ನಂಜೆ ಗೋವಿಂದಾಚಾರ್ಯ.

### ಕೇಶವಾದಿ ರೂಪಗಳು

ಪುಟ: 8+96 ಬೆಲೆ: 3–75

ಕೇಶವಾದಿ 24 ವಿಷ್ಣು ರೂಪಗಳನ್ನು ಚಿತ್ರ ಸಹಿತವಾಗಿ ನೀಡಿ ಅವುಗಳ ವಿವರಣೆ, ಉಪಾಸನೆಯ ರೀತಿಗಳನ್ನೂ ಕನ್ನಡದ ಹರಿದಾಸರು ಹೇಳಿದಂತೆ ವಿವರಿಸುವ ಪುಸ್ತಕ. ಇದರ ವಿಶೇಷವೆಂದರೆ ಇಲ್ಲಿನ ವಿವರಣೆ ಕನ್ನಡ, ತೆಲುಗು, ಹಿಂದಿ, ಆಂಗ್ಲ ಭಾಷೆಗಳಲ್ಲಿರುವುದು.

ಸಂ॥ ಶ್ರೀ ಕೆ. ಅಪ್ಪಣ್ಣಾ ಚಾರ್ಯ.

### ಕರ್ನಾಟಕ ಹರಿದಾಸರು

ಪುಟ: 8+56 ಬೆಲೆ: 2–25

ಕರ್ನಾಟಕದ ಹರಿದಾಸರಲ್ಲಿ ಪ್ರಮುಖರಾದ ಶ್ರೀಪಾದರಾಯರು, ವ್ಯಾಸರಾಯರು, ವಾದಿರಾಜರು, ಪುರಂದರದಾಸರು, ಕನಕದಾಸರು, ಪ್ರಸನ್ನ ವೆಂಕಟದಾಸರು, ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು, ಪ್ರಾಣೇಶದಾಸರು, ಮೊದಲಕಲ್ ಶೇಷದಾಸರು, ಹರಪನಹಳ್ಳಿ ಭೀಮವ್ವ, ಗುರುಜಗನ್ನಾಥದಾಸರು, ಅಸಿಗ್ಯಾಳ ಗೋವಿಂದದಾಸರುಗಳ ಚಿತ್ರಗಳೊಂದಿಗೆ ಅವರುಗಳ ಜೀವನ ವಿವರಗಳನ್ನು ಸಂಗ್ರಹವಾಗಿ, ಕನ್ನಡ, ತೆಲುಗು, ಆಂಗ್ಲ, ಹಿಂದಿ ಭಾಷೆಗಳಲ್ಲಿ ನೀಡುವ ಪುಸ್ತಕ.

ಸಂ॥ ಶ್ರೀ ಕೆ. ಅಪ್ಪಣ್ಣಾ ಚಾರ್ಯ.

### ಗೀತಾಸಾರೋದ್ಧಾರ

ಪುಟ: 20+280 ಬೆಲೆ: 4–00

ಭಗವದ್ಗೀತೆಯ ಬಗ್ಗೆ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು ನೀಡಿದ ಪ್ರವಚನಗಳ ಸಂಗ್ರಹವಾಗಿದೆ ಈ ಕೃತಿ. ಫಲಿಮಾರು, ಭಂಡಾರಕೇರಿ ಮಠಗಳ ಪೀಠಾಧಿಪತಿ ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದಂಗಳ ಮುನ್ನುಡಿಯೂ ಇದೆ. ಭಗವದ್ಗೀತೆಯ 18 ಅಧ್ಯಾಯಗಳನ್ನೂ ವಿವರವಾಗಿ, ಪಂಡಿತ ಪಾಮರ ಬೋಧಕರವಾಗಿ, ಸಮಕಾಲೀನತೆಯ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸಲಾಗಿದೆ.

ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು;

### ಸ್ತೋತ್ರಕುಸುಮಮಾಲಾ

ಡೆಮ್ಮಿ 1/16, ಪುಟ: 12+144 ಬೆಲೆ: 3–00

ನಿತ್ಯಪಾರಾಯಣಕ್ಕೆ ಉಪಯುಕ್ತವಾದ ವಿವಿಧ ದೇವತಾಸ್ತೋತ್ರಗಳನ್ನು ಇಲ್ಲಿ ಒಂದೆಡೆ ಕೂಡಿಸಿ ಕೊಡಲಾಗಿದೆ. ಗಣೇಶ, ವೆಂಕಟೇಶ, ಶ್ರೀರಾಮ, ಲಕ್ಷ್ಮೀ, ಸರಸ್ವತಿ, ಪಾಂಡುರಂಗ, ಕೃಷ್ಣ, ಮೊದಲಾದ ದೇವತೆಗಳ ಬಗ್ಗೆ ಕನ್ನಡದ ಹಾಗೂ ಸಂಸ್ಕೃತದ ಸ್ತೋತ್ರಗಳನ್ನು ಒಟ್ಟು ಗೂಡಿಸಲಾಗಿದೆ. ದಿ॥ ಡಾ॥ ಜಿ ಪಿ. ರಾಜರತ್ನಂ ಅವರ ಉಪಯುಕ್ತ ಮುನ್ನುಡಿಯೂ ಇದೆ.

ಸಂ॥ ಶ್ರೀ ಎಂ ಎಸ್. ವೆಂಕಟಾಚಲಂ.

ಶ್ರೀ ವೆಂಕಟೇಶ್ವರ ಸುಪ್ರಭಾತ

ಬೆಲೆ: 10–00

ಶ್ರೀ ವೆಂಕಟೇಶ್ವರ ಸುಪ್ರಭಾತ, ಸ್ತೋತ್ರ, ಪ್ರಪತ್ತಿಗಳನ್ನು ಮೂಲದೊಡನೆ ನೀಡಿ ಕನ್ನಡದಲ್ಲಿ ವ್ಯಾಖ್ಯಾನ ಮಾಡಲಾಗಿದೆ. ಇಲ್ಲಿನ ವಿಶೇಷವೆಂದರೆ ಹೆಚ್ಚಿನ ಶ್ಲೋಕಗಳನ್ನು ತ್ರಿವರ್ಣ ಚಿತ್ರದಲ್ಲಿ ನೀಡಲಾಗಿದೆ.

ಶ್ರೀ ವೆಂಕಟೇಶ್ವರ ಸುಪ್ರಭಾತ

ಬೆಲೆ: 0-50

ಶ್ರೀ ವೆಂಕಟೇಶ್ವರ ಸುಪ್ರಭಾತವನ್ನು ಸ್ತೋತ್ರ ಪ್ರಪತ್ತಿಗಳೊಡನೆ ಚಿತ್ರಗಳಿಲ್ಲದೆ ಕನ್ನಡದಲ್ಲಿ ವಿವರಣೆ ತಾತ್ಪರ್ಯ ನೀಡುವ ಪುಟ್ಟ ಪುಸ್ತಕವಿದು, ಸುಲಭ ಬೆಲೆಯ ಆವೃತ್ತಿಯಾಗಿ ಹೊರತರಲಾಗಿದೆ.

ಶ್ರೀ ವೆಂಕಟೇಶ್ವರ ಸುಪ್ರಭಾತ

ಬೆಲೆ: 0–12

ಶ್ರೀ ವೆಂಕಟೇಶ್ವರ ಸುಪ್ರಭಾತ, ಸ್ತೋತ್ರ, ಪ್ರಪತ್ತಿಗಳನ್ನು ಕನ್ನಡಲಿಪಿಯಲ್ಲಿ ನೀಡಲಾಗಿರುವ ಜೇಬಿನಲ್ಲಿಡಬಹುದಾದ ಪುಸ್ತಕವಿದು.

ಶ್ರೀಪಾದರಾಜರು

ಬೆಲೆ: 0–75

ಸರಳವಾಗಿ ಶ್ರೀಪಾದರಾಜರ ಕಥೆಯನ್ನು ನೀತಿಬೋಧೆಯೊಡನೆ ಹೇಳುವ ಪುಟ್ಟ ಪುಸ್ತಕ. ಎಂಟು ಚಿತ್ರಗಳೂ ಇವೆ, ಮಕ್ಕಳಿಗಾಗಿ.

ಲೇ॥ ಶ್ರೀ ಎಂ. ಎಸ್. ಗುಂಡೂರಾವ್.

ಶ್ರೀ ಮಹಿಪತಿದಾಸರು

ಬೆಲೆ: 0–85

ಸರಳವಾಗಿ ಮಹಿಪತಿದಾಸರ ಕಥೆಯನ್ನು ಹನ್ನೊಂದು ಚಿತ್ರಗಳೊಡನೆ ನೀತಿ ಬೋಧೆಯೊಡನೆ ವಿವರಿಸುವ ಪುಸ್ತಕ, ಮಕ್ಕಳಿಗಾಗಿ.

ಲೇ॥ ಡಾ॥ ಡಿ ಎಸ್. ಶಾನಭಾಗ

ಪ್ರಸನ್ನ ವೆಂಕಟದಾಸರು

ಬೆಲೆ: 0–80

ಎಂಟು ಚಿತ್ರಗಳೊಡನೆ ಪ್ರಸನ್ನ ವೆಂಕಟದಾಸರ ಕಥೆಯನ್ನು ಮಕ್ಕಳಿಗಾಗಿ ಸರಳವಾಗಿ, ಸಮಯೋಚಿತ ನೀತಿ ಸೂಕ್ತಿಗಳೊಡನೆ ಹೇಳಿರುವ ಕಥೆ ಪುಸ್ತಕ.

ಲೇ॥ ಶ್ರೀ ವಿ. ಬಾದರಾಯಣ ಮೂರ್ತಿ.

ಗೋಪಾಲದಾಸರು

ಬೆಲೆ: 0–75

ಒಂಬತ್ತು ಚಿತ್ರಗಳೊಡನೆ ಗೋಪಾಲದಾಸರ ಕಥೆಯನ್ನು ಸರಳವಾಗಿ, ನೀತಿ ಸೂಕ್ತಿಗಳ ಸಹಿತವಾಗಿ, ಮಕ್ಕಳಿಗೆ ವಿವರಿಸುವ ಪುಸ್ತಕ.

ಲೇ॥ ಶ್ರೀಮತಿ ರುಕ್ಮಿಣಿ ಗಿರಿಮಾಜಿ.

ಆಚಾರಗಳು ಆಡಂಬರಗಳು

ಬೆಲೆ: 0–40

ಸನಾತನ ಧರ್ಮದಲ್ಲಿನ ದೈನಂದಿನ ಪ್ರಾರ್ಥನೆ, ಪೂಜೆ, ವ್ರತ ವೊದಲಾದ ಆಚಾರಗಳ ಬಗ್ಗೆ–ಅವುಗಳ ಅರ್ಥ ವ್ಯಾಪಕತೆ, ಪ್ರಯೋಜನಗಳನ್ನು ವಿವರಿಸುವ ತೆಲುಗಿನ ಮೂಲದ ಅನುವಾದದ ಕಿರು ಹೊತ್ತಿಗೆಯಿದು.

ಲೇ॥ ಶ್ರೀ ಕಲ್ಲೂರಿ ಚಂದ್ರಮೌಳಿ.

ಗುರುಜಗನ್ನಾಥದಾಸರ ಕೃತಿಗಳು

ಪುಟ: 24+296+16 ಬೆಲೆ: 8–40

ಆದವಾನಿ ತಾಲ್ಲೂಕಿನ ಕೌತಾಳದ ಗುರು ಜಗನ್ನಾಥದಾಸರು 19ನೇ ಶತಮಾನದ ಉತ್ತರಾರ್ಧ ಹಾಗೂ 20 ನೇ ಶತಕದ ವೊದಲಲ್ಲಿ ಜೀವಿಸಿದ್ದು ಕರ್ನಾಟಕದ ಹರಿದಾಸರಲ್ಲಿ ಹೆಸರಾಂತವರು. ಅವರ ಕನ್ನಡದ ಕೀರ್ತನೆಗಳನ್ನು ಸಂಪಾದಿಸಿ ಇಲ್ಲಿ ನೀಡಲಾಗಿದೆ.

ಸಂ॥ ಶ್ರೀ ಕೆ. ಅಪ್ಪಣ್ಣಾಚಾರ್ಯ.

ಭಕ್ತ ಪುರಂದರದಾಸ

ಬೆಲೆ: 2–80

ಐದು ಅಂಕಗಳ ಪುರಂದರ ದಾಸರ ಜೀವನದ ಮಹತ್ವದ ಘಟನೆಗಳನ್ನು ರೂಪಿಸುವ ನಾಟಕ.

ಲೇ॥ ಶ್ರೀ ಕೆ ಅಪ್ಪಣ್ಣಾಚಾರ್ಯ.

ವ್ಯಾಪಾರೀ ರಿಯಾಯಿತಿಗಳು :

* 1000 ರೂ ಹಾಗೂ ಹೆಚ್ಚಿನ ಬೆಲೆಯ ಪುಸ್ತಕಗಳನ್ನು ಒಂದೇ ಬಾರಿ ಕೊಂಡವರಿಗೆ 30% ರಿಯಾಯಿತಿ.
* 500 ರೂ ಮೇಲ್ಪಟ್ಟು, 1000 ರೂ ಗಳೊಳಗಿನ ಬೆಲೆಯ ಪುಸ್ತಕಗಳನ್ನು ಒಂದೇ ಬಾರಿ ಕೊಂಡವರಿಗೆ 25% ರಿಯಾಯಿತಿ.
* 100 ರೂ ಮೇಲ್ಪಟ್ಟು, 500 ರೂ ಗಳೊಳಗಿನ ಬೆಲೆಯ ಪುಸ್ತಕಗಳನ್ನು ಒಂದೇ ಬಾರಿ ಕೊಂಡವರಿಗೆ 15% ರಿಯಾಯಿತಿ.
* ವಿ.ಪಿ.ಪಿ. ಸೌಕರ್ಯ ಉಂಟು.

ವಿಶೇಷ ರಿಯಾಯಿತಿ:

* ಎರಡು ರೂಪಾಯಿ ಹಾಗೂ ಹೆಚ್ಚಿನ ಬೆಲೆಯ ಪುಸ್ತಕಗಳ ಮೇಲೂ ವಿಶೇಷ ಹಬ್ಬ ಹಂದಿನಗಳಲ್ಲಿ ತಿ ತಿ.ದೇ. ಏರ್ಪಡಿಸುವ ಪುಸ್ತಕ ಪ್ರದರ್ಶನಗಳಲ್ಲಿ 30% ರಿಯಾಯಿತಿಯನ್ನು ನೀಡಲಾಗುವುದು.

---

# ಡಿ. ವಿ. ಜಿ. ಅವರ ಜೀವನದೃಷ್ಟಿ

ಕಲೆಗಳಲಿ ಪರಮಕಲೆ ಜೀವನದ ಲಲಿತಕಲೆ
ಕಲಿಸಲದನೆಳವಲ್ಲ ಬಾಹ್ಯ ಬೋಧನೆಯಿಂ
ಒಲಿದೊಲಿಸಿ ಕೊಳುವ ಲೌಕಿಕನಯದ
ಸೊಗಸನೀಂ
ತಿಳಿವುದೊಳ ಹದದಿಂದ– ಮಂಕುತಿಮ್ಮ

ಜೀವನವದೊಂದು ಪರವೈಶ್ವರ್ಯ ಬೊಮ್ಮನದು
ಸೇವೆಯದನೂರ್ಜಿತಂಗೊಳಿಸುವೆಲ್ಲಿಕ
ಈ ವರಾರ್ ಕೊಳುವರಾರೆಲ್ಲರೊಂದಾಗಿರಲು
ನೈವೇದ್ಯ ಭಾಗಿನೀಂ – ಮಂಕುತಿಮ್ಮ

ಮಾನವ ಜೀವನದ ಬಗೆಗೆ ಕ್ರಿಸ್ತಪೂರ್ವದಷ್ಟು ಹಿಂದೆಯೇ ಮಹಾಮಾನವತಾವಾದಿ ಬುದ್ಧನು ಚಿಂತಿಸುವಂತೆ ಆಧುನಿಕ ಯುಗದಲ್ಲಿ ಬಹಳವಾಗಿ ಚಿಂತಿಸಿದ ಮಹಾಚೇತನ ಡಿ ವಿ. ಜಿ ಅವರು ಬದುಕಿದ್ದ ಹತ್ತೊಂಬತ್ತನೇ ಶತಮಾನದ ಕೊನೆ ಇಪ್ಪತ್ತನೇ ಶತಮಾನದ ಪೂರ್ವಭಾಗ ಒಂದು ಸಂಧಿಕಾಲ. ಕೇವಲ ಭಾರತಕ್ಕೆ ಮಾತ್ರವಲ್ಲ ಇಡೀ ಪ್ರಪಂಚಕ್ಕೆ ಈ ಮಾತು ಅನ್ವಯಿಸುತ್ತದೆ. ರಾಜಕೀಯ, ಸಾಮಾಜಿಕ, ವೈಜ್ಞಾನಿಕ, ಮಾರ್ಕ್ಸ್‌ವಾದದಂತಹ ಚಿಂತನರೂಪವಾದ ಕ್ರಾಂತಿಗಳು ಈ ಕಾಲದಲ್ಲೇ ಬೆಳೆದುವು. ಭಾರತದಲ್ಲಿ ಈ ಎಲ್ಲದರ ಪರಿಣಾಮ; ಸ್ವಾತಂತ್ರ್ಯ ಹೋರಾಟದಿಂದ ಆದರ [illegible] ಮೊದಲಾದವುಗಳಿಂದ ಹೊಸಯುಗವೇ ರೂಪುಗೊಳ್ಳುವ ಕಾಲ. ಭಾರತದ ಈ ಸಂದರ್ಭದಲ್ಲಿ ಸ್ವಾಧ್ಯಾಯ ಅನುಭವದಿಂದಲೇ ಜ್ಞಾನಿಗಳಾದ ಡಿ. ವಿ. ಜಿ. ಯವರು ಜೀವನವ ಕುರಿತು ಗಾಢವಾಗಿ ಚಿಂತಿಸಿ ತಮ್ಮ ಚಿಂತನ ಮಂಥನಗಳನ್ನು ಮಂಕುತಿಮ್ಮನ ಕಗ್ಗದ ರೂಪದಲ್ಲಿ ಪ್ರಕಟಿಸಿದರು.

ವಿಶದವಾದೊಂದು ಜೀವನ ಧರ್ಮ ದರ್ಶನವ
ನುಸುರಿಕೊಳೆ ತನ್ನ ಮನಸಿಗೆ ತಾನೆ ಒಗೆದು
ನಿಸದವಂ ಗ್ರಂಥಾನುಭವಗಳಿಂದಾರಿಸ ತ
ಹೊಸೆದನೀ ಕಗ್ಗವನು–ಮಂಕುತಿಮ್ಮ

ಮಂಕುತಿಮ್ಮನ ಕಗ್ಗವೀ ಜೀವನ ಧರ್ಮ ದರ್ಶನವೆಂದು ಅವರು ತಾವಾಗಿಯೇ ಹೇಳಿಕೊಂಡಿದ್ದಾರೆ. ಅವರ ಇಡೀ ಸಾಹಿತ್ಯರಾಶಿಯೇ ಈ ವಿಚಾರವನ್ನೊಳಗೊಂಡಿದೆ ಎಂದರೆ ತಪ್ಪಾಗದು.

ಡಾ॥ ಯು. ರಾಮಭಟ್ಟ

"ಸಾಹಿತ್ಯ ಜೀವನದ ಪ್ರತಿಬಿಂಬ" ತಾನೆ. ಆದರೆ ಇಲ್ಲಿ ಜೀವನ ವಿಮರ್ಶೆ ಪ್ರತಿಬಿಂಬವಲ್ಲ ಆದ್ದರಿಂದಲೇ ಅವರು ಅದನ್ನು ದರ್ಶನವೆಂದರು. ಅವರ ಜೀವನ ಮೀಮಾಂಸೆ ಕೇವಲ ಗ್ರಂಥಗಳ ಓದಿನ ಸಾರವಲ್ಲ. ಅದು ತನ್ನ ಜೀವನಾನುಭವ, ತಾನು ಒಡನಾಡಿಯಾಗಿ ಅನುಭವಿಸಿದ ಮಹಾಚೇತನಗಳ ಜೀವನದ ಶ್ರೇಷ್ಠ ಮಾದರಿಗಳಿಂದ ಸಿದ್ಧವಾದುದು. ಅವರು ತಮ್ಮ ಜ್ಞಾಪಕ ಚಿತ್ರಶಾಲೆಯ ಕೆಲವು ಸಂಪುಟಗಳಲ್ಲಿ ನೀಡಿದ ಶ್ರೇಷ್ಠ ಜೀವನ ಮಾದರಿಗಳನ್ನು ಮರೆಯುವಂತಿಲ್ಲ. ಉದಾ॥ ಮಹಾವಿದ್ವಾಂಸರೂ ವಕೀಲರೂ ಆದ ಟಿ. ಆರ್. ವೆಂಕಟರಾಮಶಾಸ್ತ್ರಿಗಳು ಕೋರ್ಟಿನಲ್ಲಿ ತಮ್ಮ ವಾದವನ್ನು ಕಾರಣಾಂತರದಿಂದ ಪೂರ್ಣಗೊಳಿಸಲಾಗದಿದ್ದುದಕ್ಕೆ, ಫೀಸನ್ನು ಹಿಂದಿರುಗಿಸಿದ್ದು, ಅವರು ತಾನಾಗಿಯೇ ಒದಗಿ ಬಂದ ಮಂತ್ರಿಪದವಿಯನ್ನು ಸ್ವಾಭಿಮಾನದ ಕಾರಣಕ್ಕಾಗಿ ತಿರಸ್ಕರಿಸಿದ್ದು, ಚಕ್ರವರ್ತಿ ರಾಜಗೋಪಾಲಾಚಾರ್ಯರು ತನ್ನ ಸ್ನೇಹಿತರಾದ ನವರತ್ನ ರಾಮರಾಯರು ತೀರಿಕೊಂಡಾಗ ಅವರ ಮೇಲಿನ ತನ್ನ ಸ್ನೇಹವನ್ನು ತೋರಿಸಿದ ಬಗೆ – ಮೊದಲಾದುವು ಅವರು ಜೀವನಾದರ್ಶಗಳಿಗೆ ಇಂತಹ ಹಲವಾರು ಮಹನೀಯರ ನೈಜ ಜೀವನಗಳ ಘಟನೆಗಳಿಂದಲೇ ಉದಾಹರಣೆಗಳನ್ನೆತ್ತಿ ತೋರಿಸಿದ್ದಾರೆ.

ಡಿ. ವಿ. ಜಿ ಯವರ ಜೀವನ ಮೀಮಾಂಸೆಯನ್ನು ಹೇಳುವಾಗ ಅವರು ಅದಕ್ಕಾಗಿಯೇ ಬರೆದ ಎರಡು ಪುಟ್ಟ ಕೃತಿಗಳನ್ನು ಹೆಸರಿಸದಿರಲು ಸಾಧ್ಯವಿಲ್ಲ. ಬಾಳಿಗೊಂದು ನಂಬಿಕೆ–ಎಂಬ ಪುಟ್ಟ ಕೃತಿಯಲ್ಲಿ ಮಾನವ ಜೀವನದ ಬಗೆಗೆ ಇರುವ ತಪ್ಪು ಕಲ್ಪನೆ,ಪಾಮರ ವೇದಾಂತವನ್ನು ಖಂಡಿಸಿ ಪುರುಷ ಪ್ರಯತ್ನದ ಆವಶ್ಯಕತೆಯನ್ನು ಪ್ರತಿಪಾದಿಸಿದ್ದಾರೆ.

ಬದುಕು ಅಥವಾ ಜೀವನ ಅಥವಾ ಬಾಳು ಎಂಬುದು ದೊಡ್ಡವಸ್ತು, ಬದುಕುವುದು ಪಾಪವಲ್ಲ, ಚೆನ್ನಾಗಿ ಬದುಕಲು ಪ್ರಯತ್ನ ಪಡುವುದು ನಾಚಿಕೆಯ ಕೆಲಸವಲ್ಲ. ಬದುಕನ್ನು ಒಳ್ಳೆಯದನ್ನಾಗಿ ಮಾಡಿಕೊಂಡು ಚೆನ್ನಾಗಿ ಉಪಯೋಗಿಸುವುದೇ ನಮಗಿರುವ ಕರ್ತವ್ಯ, ಎಂದು ಕರೆಕೊಡುತ್ತಾರೆ.

ಅಗ್ಗದ ವೈರಾಗ್ಯ ತಕ್ಕುದ್ದಲ್ಲ...............
ಇದೇ ಪಾಮರ ವೇದಾಂತ

ಭಕ್ತಿ ಎಂಬುದು ಬರಿಯ ಮನಸ್ಸಿನ ತಳಮಳವಲ್ಲ ಪುರುಷಶಕ್ತಿಯ ಪ್ರಯೋಗ ಆತ್ಮಶಕ್ತಿ ಎಷ್ಟೋ ಜನಕ್ಕೆ ದೇವಸ್ಥಾನ ಒಂದು ಅಂಗಡಿ.... ಸರಕಿಗೆ ಪ್ರತಿಸರಕು ಬಹುಮಂದಿಯ ಭಕ್ತಿ –ಎಂದು ಸ್ವಾರ್ಥ ಪ್ರೇರಿತ ಭಕ್ತಿಯನ್ನು ಖಂಡಿಸಿದರೂ ದೈವ ಸಹಾಯವಿಲ್ಲದೆ ಜಯವಿಲ್ಲ, ಅದರ ಜೊತೆಗೆ ಸ್ವಪ್ರಯತ್ನವಿಲ್ಲದೆ ದೈವಸಹಾಯವಿಲ್ಲ ಎಂಬುದೂ ನಿಜ – ಎಂದು ದೈವ ನಂಬಿಕೆ ಪುರುಷ ಪ್ರಯತ್ನ ಸಮರ್ಥಿಸಿದ್ದಾರೆ

ಸಂಸಾರ ನಮ್ಮನು ಅಳಿಸಿ ನಗಿಸಿ ಪಕ್ವಮಾಡುತ್ತದೆ........ನಾವೆಲ್ಲ ಮೊದಲು ಭಾರತೀಯರು ಅನಂತರ ಹಿಂದೂಗಳು ಕನ್ನಡಿಗರು ಎಂಬ ವಿಶಾಲ ಹೃದಯವನ್ನು ಪ್ರಕಟಿಸಿದ್ದಾರೆ. ಜಗತ್ತೇ ಪ್ರತ್ಯಕ್ಷದೈವ ಪೌರುಷವೇ ದೇವರು ನಮಗೆ ನಿಯಮಿಸಿರುವ ಸಿದ್ಧಾಂತ ಜಗನ್ಮಿಥ್ಯಾಸಿದ್ಧಾಂತವು ಬ್ರಹ್ಮದೃಷ್ಟಿಯಿಂದ ಒಪ್ಪಿಗೆ ಪಡೆಯಬಹುದೇ ಹೊರತು ಜೀವನ ದೃಷ್ಟಿಯಿಂದಲ್ಲ ಎಂದು ಈ ಜಗತ್ತಿನ ಮಾನವ ಜೀವನವನ್ನು ಸಮರ್ಥಿಸಿದ್ದಾರೆ

ಸಂಸ್ಕೃತಿ ಎಂಬ ಗ್ರಂಥದಲ್ಲಿ ಸುಸಂಸ್ಕೃತನೆಂಥವನೆಂಬುದನ್ನು ಆ ಜೀವನದ ಐದು ಲಕ್ಷಣ (ಸ್ವಸ್ಥಾನ, ಪರೇಂಗಿತ ಪರಿಗ್ರಹಣ, ಸ್ವಾರ್ಥನಿಯಮನ, ಸಮನ್ವಯ ದೃಷ್ಟಿ, ಸರಸತೆ) ಗಳನ್ನು

ಡಿ. ವಿ. ಜಿ. ಎಂದೇ ಪರಿಚಿತರಾಗಿದ್ದ ಡಾ॥ ಡಿ. ವಿ. ಗುಂಡಪ್ಪನವರ ಜನ್ಮಶತಾಬ್ದಿಯನ್ನು 1987–88 ರಲ್ಲಿ ಕರ್ನಾಟಕದಲ್ಲೆಲ್ಲ ಬಹಳ ಉತ್ಸಾಹ, ಆಸಕ್ತಿಗಳಿಂದ ಆಚರಿಸಲಾಯಿತು. ಕೋಲಾರದ ಮುಳಬಾಗಿಲಿನಲ್ಲಿ ಹುಟ್ಟಿ, ಬೆಂಗಳೂರು ಸೇರಿದ ಶ್ರೀಯುತರು ಭಾರತೀಯತೆಯ, ವೈದಿಕ ಮೌಲಿಕತೆಯ–ಬಹು ಶ್ರೇಷ್ಠ ಪ್ರತಿಪಾದಕರಾಗಿದ್ದರು. ಭಗವದ್ಗೀತೆಯ ಬಗೆಗಿನ ಅವರ ವ್ಯಾಖ್ಯಾನ ಕೇಂದ್ರಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನು ಗಳಿಸಿದೆ. ಕವಿ, ಚಿಂತನಶೀಲ, ಪತ್ರಿಕೋದ್ಯಮಿ ಆದ ಅವರ ನೆನಪಿನಲ್ಲಿ ಈ ಲೇಖನ–ಸಂ॥

ಜೀವನದ ನೈಜ ಉದಾಹರಣೆಗಳೊಂದಿಗೆ ಸಮರ್ಥಿಸಿದ್ದಾರೆ.

ಈ ಜೀವನ ತತ್ತ್ವಗಳನ್ನೇ ತಮ್ಮ ಬಾಳು, ತಿಳುವಳಿಕೆಗಳ ಅನುಭವಗಳ ಆಧಾರದಿಂದಲೇ ಅವರು ಮಂಕುತಿಮ್ಮನ ಕಗ್ಗದಲ್ಲಿ 945 ಚಿಕ್ಕ ಮುಕ್ತಕ ಪದ್ಯಗಳಲ್ಲಿ ಚರ್ಚಿಸಿದ್ದಾರೆ. ಮಂಕು ತಿಮ್ಮನೆಂಬ ಹಳ್ಳಿಯ ಅಧ್ಯಾಪಕನು ತನ್ನ ಅಳಿಯ ಸೋದರಿಗೆ ಬರೆದಿಟ್ಟ ಚಿಕ್ಕ ಹೊತ್ತಿಗೆ ಮಂಕು ತಿಮ್ಮನ ಕಗ್ಗ. ಡಿ. ವಿ. ಜಿ ಯವರು ತನ್ನನ್ನೇ ಅವಿವಾಹಿತ ವಿರಕ್ತ ಸುಸಂಸ್ಕೃತ ಮಂಕುತಿಮ್ಮನನ್ನಾಗಿಯೂ ಕೇಳುಗನನ್ನೇ ಸೋದರಿಯನ್ನಾಗಿ ಕಲ್ಪಿಸಿದ್ದಾರೆ. ಇಂತಹ ಚಿಂತನ ಶೀಲ ವಿರಕ್ತ ಭಾವ ಜೀವಿಗಳನ್ನು ಸಾಮಾನ್ಯರು ಮಂಕು ಮರುಳು ಎಂದು ಭಾವಿಸುತ್ತಾರೆ. ಎಂಬ ಅರ್ಥದಲ್ಲಿ ಈ ಹೆಸರನ್ನಿಟ್ಟಿರಬೇಕು. ಸಂಸತ್ತಿನ ಭಗವದ್ಗೀತೆ, ಉಪನಿಷತ್ತುಗಳು ಶರಣರ ವಚನಗಳು ಇರುವಂತೆ ಮುಕ್ತಕ ಪದ್ಯಗಳು ಸೂತ್ರರೂಪವಾಗಿ ಆ ವಿಸ್ಮಯ ಜೀವನದ ಸತ್ತ್ವಗಳನ್ನೊಳಗೊಂಡಿವೆ. ಜೀವನಧರ್ಮದರ್ಶನವೇ ಇದರ ಉದ್ದೇಶವೆಂದು ಅದರ ಕೊನೆಯಲ್ಲಿ ಹೇಳಿದ್ದಾರೆ.

ಮಾನವ ಜೀವನ ಅಂದೊಡನೆ ಅದರಲ್ಲಿ ವಿಧಿ, ಭಕ್ತಿ, ಪೂಜೆ, ಧರ್ಮ, ಸಂಸಾರ, ಎಡರು ತೊಡರು, ರಾಗದ್ವೇಷಾದಿಗಳು, ಸುಖ, ದುಃಖ, ಅಳು, ನಗು ಮೊದಲಾದ ನಾನಾ ಅಂಶಗಳು ತುಂಬಿಕೊಂಡಿವೆ. ಇವೆಲ್ಲವನ್ನೂ ಕಾವ್ಯೊಬ್ಬ ಗಾಢ ಚಿಂತಕರಾಗಿ ಅವರು ವಿಶ್ಲೇಷಿಸುತ್ತಾರೆ. ಪರಿಹಾರವನ್ನು ಸೂಚಿಸುತ್ತಾರೆ. ಜೀವನವನ್ನೂ, ಅದರ ಹಲವಾರು ಅಂಶಗಳನ್ನೂ ಕಗ್ಗ ಬೇರೆ ಬೇರೆ ದೃಷ್ಟಿಗಳಿಂದ ಕಾಣುತ್ತದೆ. ಅದರ ವಿಷಯದಲ್ಲಿ ತಳೆಯಬಹುದಾದ ಬೇರೆ ಬೇರೆ ನಿಲುವುಗಳನ್ನು ಒಳಗೊಳ್ಳುತ್ತದೆ ಎಂದ ಎಲ್. ಎಸ್. ಶೇಷಗಿರಿ ರಾಯರು ಇದು ಪರಿಣತ ಮನಸ್ಸಿನ ಕಾವ್ಯ, ಇದು ಬಾಳನ್ನು ಸ್ವಲ್ಪ ದೂರನಿಂತು ನೋಡಬಲ್ಲ ಮನಸ್ಸಿಗೆ ಶ್ರೀಮಂತ ಅನುಭವವನ್ನು ಕೊಡುವ ಕಾವ್ಯ ಬಾಳನ್ನು ವಿಮರ್ಶಿಸಿ ಬಾಳನ್ನು ಸ್ವೀಕಾರಾರ್ಹವೆನ್ನುತ್ತದೆ– ಎಂದಿದ್ದಾರೆ

ನಮ್ಮ ಜೀವನವು ಒಂದು ಹದದಲ್ಲಿ ಸಾಗಿ ತೃಪ್ತಿಕರವೆನಿಸಲು ಬೇಕಾದ ಸರಳವಾದ ಸೂತ್ರಗಳು ಮಂಕುತಿಮ್ಮನ ಕಗ್ಗದಲ್ಲಿವೆ ಎಂದು ವಿ. ಶ್ರೀಕಂಠಯ್ಯನವರ ಅಭಿಪ್ರಾಯ ಪಟ್ಟರೆ, ಹಿರಿಯ ವಿದ್ವಾಂಸರಾದ ಎಂ. ವಿ. ಸೀತಾರಾಮಯ್ಯನವರು ಇಹಪರ ಸಮನ್ವಯದ ದರ್ಶನದ ಸಾಧಿಸಿದೆ, ಬಹು ಜಾಣನೆಂತೂ ನೀ ಮಂಕುತಿಮ್ಮ- ಎಂದು ಮೆಚ್ಚಿ ಕೊಂಡಾಡಿದ್ದಾರೆ.

ಮಾನವ ಜೀವನಕ್ಕೆ ಸಂಬಂಧಿಸಿದ ಅದರ ಹಲವು ಅಂಶಗಳನ್ನು ಡಿ ವಿ ಜಿ. ಯವರು ವಿಶ್ಲೇಷಿಸಿದ ರೀತಿಯನ್ನು ಸ್ಥೂಲವಾಗಿ ನೋಡಬಹುದು. ಮಾನವ ಜೀವನದ ಬಹಳ ಮುಖ್ಯ ಅಂಶವೆಂದರೆ ಗತಾನುಗತಿಕವಾಗಿ ಬಂದಿರುವ ದೇವರ ನಂಬಿಕೆ ವಿಧಿ ಡಿ. ವಿ. ಜಿ. ಯವರು ನಿರೀಶ್ವರವಾದಿಗಳಲ್ಲ ಅವರು ದೇವರನ್ನು ಕಂಡ ಬಗೆ ಯಾವ ಧರ್ಮದವರೂ ಒಪ್ಪುವಂತಿದೆ.

ದೇವರು ಯಾವ ಆಕಾರವನ್ನೂ ಕಲ್ಪಿಸದ ಆದೊಂದು ಅನುಭವ ಮಾತ್ರವೇದ್ಯವಾದ ನಿಗೂಢ ಶಕ್ತಿ ಎನ್ನುತ್ತಾರೆ.

ಜೀವ ಜಡ ಪ್ರಪಂಚವನಾವುದೋ
ಆವರಿಸಿಕೊಂಡು—ಮೊಳನರೆದು ಮಿಹುದಂತೆ
ಭಾವಕೊಳ ಪಡದಂತೆ ಆಲತೆಗಳಪಡದಂತೆ
ಆ ವಿಶೇಷಕೆ ಮಣಿಯೋ—ಮಂಕುತಿಮ್ಮ
ಗಗನತಲೆ ನವಿರಾಗೆ ಪೆರೆತಾರೆ ಹೂವಾಗೆ
ಜಗವೆಲ್ಲವ ಪುವಾಗೆ ಮಾಯೆ ಸತಿಯಾಗೆ
ನಗುನಗುವಬೊಬ್ಬಿಡುವ ಜೀವ ತಾಂಡವ ರಸಿಕ
ಭಗವಂತ ಶಿವರುದ್ರ—ಮಂಕು ತಿಮ್ಮ

ಇಲ್ಲಿ ಭೂಃಪಾದೌಯಸ್ಯ ನಾಭಿರ್ವಿಯತೆ..... ಎಂಬ ಸಂಸ್ಕೃತ ಶ್ಲೋಕ ನೆನಪಾಗುತ್ತದೆ. ಆದ್ದರಿಂದಲೇ ಕಂಡ ದೈವಕ್ಕೆಲ್ಲ ಕೈಮುಗಿದರೇನಹುದು ಎಂದು ಪ್ರಶ್ನಿಸುತ್ತಾರೆ ದೇವರು ಬಾಹ್ಯೇಂದ್ರಿಯಕ್ಕೆ ಗೋಚರವಲ್ಲ ಮನಸ್ಸಿನ ಅನುಭವಕ್ಕೆ ಮಾತ್ರ ಕಾಣುವನು.

ಕುರುಡನಿನ ಚಂದ್ರನನು ಕಣ್ಣಿಂದ ಕಾಣುವನೆ
ಅರಿಯುವಂ ನೋಂಕೆಂದೆ ಬಿಸಿಲು ತಣಿವುಗಳ
ನರನು ಮಂತೆಯೆ ಮನಸಿನನುಭವದಿ
ಕಾಣುವನು
ಪರಸತ್ತ್ವ ಮಹಿಮೆಯನು—ಮಂಕುತಿಮ್ಮ

ಆ ದೈವ ಶಕ್ತಿಗೆ ಇನ್ನೊಂದು ಹೆಸರು ವಿಧಿ. ಮಾನವನು ಎಣಿಸಿದ್ದು ಆಗದಿರಬಹುದು ಎಣಿಸದಿದ್ದದ್ದು ಆಗಬಹುದು. ಈ ರೀತಿ ಅವನನ್ನು ಪಾಕ ಮಾಡುವುದು ವಿಧಿ

ಕೊಯಿಸುತ ಬೇಯಿಸುತ ಹೆಚ್ಚುತ್ತ
ಕೊಚ್ಚುತ್ತ
ಕಾಯಿಸುತ ಕರಿಯುತ್ತ ಸುರಿಯುತ್ತ ಸುಡುತ
ಈಯವನಿಯಲೆಯೊಳೆಮ್ಮಯ
ಬಾಳನಟ್ಟು ವಿಧಿ
ಬಾಯಿಚಪ್ಪರಿಸುವನು—ಮಂಕುತಿಮ್ಮ

ಹೊನ್ನೆಂದು ಜಗದಿ ಕೈಗೆ ಕೊಂಡುದನು ವಿಧಿ
ಮಣ್ಣೆನ್ನುವನ್ ಆವನವರ ಮಣ್ಣೆನುವೆ ನೀನ್

ಇದನ್ನೆಲ್ಲಾ ನೋಡಿದರೆ ಈ ಜೀವನವೇನು ಸೃಷ್ಟಿಯೇನು ಸಂಸಾರವೇನು ಇದರರ್ಥವೇನು ಎಂದು ತಮ್ಮೊಳಗೇ ಚಿಂತನೆಯ ಪ್ರಶ್ನೆ ಹೊಂದಿ ಉತ್ತರ ಕಂಡು ಹಿಡಿಯಲು ಪ್ರಯತ್ನಿಸುತ್ತಾರೆ ಕೇನೋಪನಿಷತ್ತಿನಲ್ಲಿ ಕೇನ? ಕೇನ? ಎಂದು ಪ್ರಶ್ನಿಸುವಂತೆ ಇವರೂ ಪ್ರಶ್ನಿಸುತ್ತಾರೆ.

ಏನು ಜೀವನದರ್ಥ? ಏನು ಪ್ರಪಂಚಾರ್ಥ?
ಏನು ಜೀವ ಪ್ರಪಂಚಗಳ ಸಂಬಂಧ?
ಕಾಣದಿಲ್ಲಿ ಪೂರ್ವೇಶಾನು ಮುಂಟೇ? ಆದೇನು
ಜ್ಞಾನಪ್ರಮಾಣ ವೇಂ—ಮಂಕುತಿಮ್ಮ

ಇನ್ನೆಷ್ಟೋ ಪ್ರಶ್ನೆಗಳು ಅವರ ಮನಸ್ಸಿನಲ್ಲಿ ತಲೆದೋರುತ್ತವೆ. ಒಗಟೆಯೇನೀ ಸೃಷ್ಟಿ? ಬಡುಕಿಗಾರ್ ನಾಯಕರು? ಮಾನವನ ಗುರಿಯೇನು? ಬೆಲೆಯೇನು ಮುಗಿವೇನು? ಏನರ್ಥವಿದಕೆಲ್ಲ? ಎಂದು ಎಷ್ಟು ಚಿಂತಿಸಿದರೂ ಅರ್ಥವಾಗದು. ಸಂಶಯವೇ ಬೆಳೆಯುತ್ತದೆ. ಸೃಷ್ಟಿ–

ಎಷ್ಟು ಚಿಂತಿಸಿದೊಡಂ ಸಂಕೆಯನೆ ಬೆಳೆಸುವೀ
ಸೃಷ್ಟಿಯಲಿ ತತ್ತ್ವವೆಲ್ಲಿಯಾ ಬೆದಕಿ ನರನು
ಕಷ್ಟಪಡು ತಿರಲೆನುವುದೇ ಬ್ರಹ್ಮವಿಧಿಯೋನೊ
ಆಷ್ಟೇ ನಮ್ಮಯಪಾಡು—ಮಂಕುತಿಮ್ಮ

ಒಂದೊಮ್ಮೆ ನಿರಾಶೆ ಹಣಿಕಿದರೂ ಸೋಲ್ಲಿಸುವರಾರು ಸೃಷ್ಟಿಯ ಪೇಟೆಯೊಳಗುಟ್ಟ, ಎಲ್ಲ ಬಾಳು ರಹಸ್ಯ ಎಂದು ನಿಟ್ಟುಸಿರು ಬಿಟ್ಟರೂ ಬ್ರಹ್ಮ ಮತ್ತು ಸೃಷ್ಟಿ, ಸತ್ಯ ಮತ್ತು ಮಿಥ್ಯೆಗಳ ಸಂಬಂಧವೇನೆಂದು ಇನ್ನಷ್ಟು ಕೌತುಕ ತಾಳುತ್ತಾರೆ.

ಬ್ರಹ್ಮವೇ ಸತ್ಯ ಸೃಷ್ಟಿಯೇ ಮಿಥ್ಯೆಯೆನ್ನುವೊಡೆ
ಸಂಬಂಧ ವಿಲ್ಲವೇನೀ ವಿಷಯಯುಗಕೆ?
ನಮ್ಮ ಕಣ್ಮನಗಳೆ ನಮಗೆ ಸಟೆ ಪೇಳುವೊಡೆ
ನೆಮ್ಮುವುದದಾರನೋ—ಮಂಕುತಿಮ್ಮ

(10ನೇ ಪುಟದಿಂದ)

ನಾವು ನೋಡುವ ಮತ್ತು ಕೇಳುವ ವಿಷಯಗಳನ್ನು ಮನಸ್ಸು ಗ್ರಹಿಸಿದಾಗ ನಮಗೆ ಅವುಗಳ ಅನುಭವವಾಗುತ್ತದೆ; ಮತ್ತು ಅವುಗಳನ್ನು ನಾವು ನಂಬುತ್ತೇವೆ. ಈ ಅನುಭವದಿಂದ ಮನಸ್ಸೆಂಬುದೊಂದಿರುವುದೆಂದು ಒಪ್ಪಿಕೊಳ್ಳುವೆವೇ ವಿನಾ ಯಾರಾದರೂ ಮನಸ್ಸನ್ನು ನೋಡಿರುವರೇ ? ಮನೆಗಳಲ್ಲಿ ವೈರುಗಳಲ್ಲಿ ಪ್ರವಹಿಸುತ್ತಿರುವ ಎಲೆಕ್ಟ್ರಿಕ್ ಕರೆಂಟು (*Electric Corrent*) ಕಣ್ಣಿಗೆ ಕಾಣಿಸುವುದೇ ? ಇಲ್ಲ. ಇಂಥಾ ಉದಾಹರಣೆಗಳನ್ನು ಅನೇಕಾನೇಕ ಹೇಳಬಹುದು. ಹೀಗೆ ಮನುಷ್ಯನಿಗೆ ಉಂಟಾಗುವ ಅನುಭವ, ಅರಿವುಗಳು ಅವನಿಗೆ ಅನೇಕ ಬಗೆಯಲ್ಲಿ ಉಂಟಾಗುತ್ತವೆ. ಶಕ್ತಿಯ ಪ್ರದರ್ಶನವೂ ಇಂಥಾದ್ದೇ. ಒಬ್ಬನು ಮಾಡುವ ಅದ್ಭುತಕಾರ್ಯಗಳಿಂದ ಅವನ ಶಕ್ತಿಯ ಮಹತ್ವ ವೆಷ್ಟೆಂದು ಅರಿಯಬಹುದೇ ವಿನಾ ಶಕ್ತಿಯು ಕಣ್ಣಿಗೆ ಕಾಣುವ ಪದಾರ್ಥವಲ್ಲ. ಅನುಭಗಳು ಅನೇಕವಿಧದಲ್ಲಿ ಉಂಟಾಗುವುವು ಅದೇ ರೀತಿಯಲ್ಲಿ ಅನೇಕವರ್ಷಗಳ ಅಥವಾ ಜನ್ಮಗಳ ಸಾಧನೆಯಿಂದ ಬ್ರಹ್ಮಸಾಕ್ಷಾತ್ಕಾರವನ್ನು ಅನುಭವದಿಂದ ಪಡೆದವರಿಗೆ ಬ್ರಹ್ಮದ ಅರಿವುಂಟಾಗುವುದು. ನಾವೂ ಆ ಸಾಧನೆಗಳನ್ನು ಅಭ್ಯಾಸ ಮಾಡಿದರೆ ಬ್ರಹ್ಮದ ಅರಿವನ್ನು ಪಡೆದು ಅನುಭವಿಸಬಹುದು. (ಸಶೇಷ)

ಇದು ಬಗೆಹರಿಯುವ ಸಮಸ್ಯೆಯಲ್ಲ, ಕಣ್ಣಿಗೆ
ಕಾಣುವ ಈ ಜಗತ್ತು ಸುಳ್ಳಲ್ಲ. ಬ್ರಹ್ಮ ದೃಷ್ಟಿಯಿಂದ ಮಿಥ್ಯೆಯಾದರೂ ಜೀವನ ದೃಷ್ಟಿಯಿಂದಲ್ಲ ...ರಿಂದ ಬದುಕು ಮುಖ್ಯ. ಬದುಕು ಏನು?ಹೇಗೆ?

## ದುಡುಕು-ಜೀವನ-ಸಂಸಾರ

ಧರೆಯ ಬದುಕೇನದರ ಗುರಿಯೇನು ಫಲವೇನು
ಬರಿಬಳಸು ಬಡಿದಾಟ ಬರಿ ಪರಿಭ್ರಮಣೆ
ತಿರುತಿರುಗಿ ಹೊಟ್ಟೆ ಹೊರಕೊಳುವ
ಮೃಗಖಗಕಿಂತ
ನರನು ಸಾಧಿಸುವುದೇನು?–ಮಂಕುತಿಮ್ಮ

...ಧಾರಣ ಪ್ರಾಣಿ ಪಕ್ಷಿಗಳ ಬದುಕಿಗೂ ಮಾನವ ಬದುಕಿಗೂ ವಿಶೇಷ ಅಂತರವಿಲ್ಲ. ಬದುಕು ...ವು ಇವಕ್ಕೆ ಮೊದಲಿಲ್ಲ, ಮುಗಿವಿಲ್ಲ, ನಿಲುವಿಲ್ಲ ...ನುಚರಾಲವೊಂದು, ಒಬ್ಬ ನಿನ್ನೊಬ್ಬನಂತಿಲ್ಲ... ...ವೇಕದೊಳ್ ಬಹುಳ... ಹೀಗೆ ವಿಚಿತ್ರವೆನಿಸಿ.

ತಿರುತಿರುಗಿ ತಿರುಗುತ್ತ ಬುಗುರಿ ತಾನೇ ಸೋತು
ತಿರೆಗುರುಳುವುದು ತನ್ನ ಬಲವ ತಾಂ ಕಳೆದು
ನರನು ಮಂತೆಯೆ ಸುತ್ತಿ ಸುತ್ತಿ ಕಡೆಗೊಂದುದಿನ
ತಿರುವನ ಸ್ಥಿರತಿರೆಗೆ–ಮಂಕುತಿಮ್ಮ

...ಗುರಿಯಂತೆ ತಿರುಗುತಿತ್ತು ಈ ಮಾನವ ದೇಹ ...ನೆಗೊಮ್ಮೆ ಧರೆಗುರುಳುತ್ತದೆ. ಸಂಸಾರವೊಂದು ...ಸರದಂತೆ.

ಪೂಸರದಿ ಕಾಂತಿ ಸೌರಭ ಮೊದಲನೆಯ
ತಾಸು
ವಾಸನೆಯ ಹಳಸು ಕೊಳಕೊಳಚೆಯಾ ಬಳಿಕ
ಮಾಸಿನಲು ನಲುಗಿ ಮುಳ್ಳಹುದು ಮೂರನೆಯ
ತಾಸು
ಸಂಸಾರ ಕಥೆಯದುವೆ–ಮಂಕುತಿಮ್ಮ

ಹೇಗೆಂದು ಬಾಳನ್ನು ಹೀಗಳೆಯಬಾರದು. ವ್ಯರ್ಥ ಜೀವನದ ಬಡಿದಾಟ ಎನ್ನಬಾರದು. ಬಾಳನ್ನು ಒಲ್ಲೆನೆನಬಾರದು. ಉಲ್ಲಾಸದಿಂದ ಅನ್ಯಾಯವನ್ನೆದುರಿಸಿ ಹೋರಾಡಲು ಎಲ್ಲರು ಸಿದ್ಧರಿರಬೇಕು ಜೀವನ ದ್ರಾಕ್ಷಾರಸವಲ್ಲ, ಕಬ್ಬಿನ ಜಲ್ಲೆಯಂತೆ ಕಷ್ಟ ಭೋಜನ. ಬಾಳನ್ನು ಹಳಿದು ಗೋಳಿಟ್ಟು ಪ್ರಯೋಜನವಿಲ್ಲ, ಬಾಳಿದಲ್ಲದೆ ತಪ್ಪದು. ಅದರಲ್ಲಿ ಪಾಲುಗೊಳ್ಳಲು ಅಳಬಾರದು. ಜೀವನವೆಂಬುದು ಬ್ರಹ್ಮನು ನೀಡಿರುವ ಪರಮೈಶ್ವರ್ಯ. ಅದನ್ನು ಊರ್ಜಿತಗೊಳಿಸುವ ಎಲ್ಲಾ ಕೆಲಸ ಅವನ ಸೇವೆ. ಆದ್ದರಿಂದ ಕಷ್ಟಕ್ಕೆ ಹೆದರಿ ಓಡಬಾರದು, ಎಲ್ಲಿ ಹೋದರೂ ನಮ್ಮ ಮನಸ್ಸು ನಮ್ಮಲ್ಲೆ ಇರುವುದರಿಂದ ಅದನ್ನೇ ಸರಿಪಡಿಸಬೇಕು. ಡಿ. ವಿ. ಜಿ. ಯವರು ಸಂಸಾರದ ಕಷ್ಟಗಳನ್ನು ಗಮನಿಸಿ ಪಲಾಯನವಾದಿಗಳಾಗಲಿಲ್ಲ.

ಮನೆಯ ತೊರೆದೋಡಲೇಂ ವನಗುಹೆಯ
ಸಾರಲೇಂ?
ತನುವನುಗ್ರ ವ್ರತಗಳಿಂದೆ ದಂಡಿಸಲೇಂ?
ಬಿನದಗಳನರಸಿ ನೀನೂರೂರೊಳಲೆದೊಡೇಂ?
ಮನವ ತೊರೆದಿರಲಹುದೇ–ಮಂಕುತಿಮ್ಮ

ಬದುಕು ಅನಿವಾರ್ಯ, ನಾವು ಕೇಳಿ ಬಂದದ್ದಲ್ಲ, ನಾವು ಹೇಳಿ ಹೋಗುವುದಿಲ್ಲ. ಆದ್ದರಿಂದ ಹೇಗೆ ಬದುಕಬೇಕೆಂದು ತಿಳಿದು ಬದುಕುವುದೇ ಕರ್ತವ್ಯ.

ಇರುವನ್ನವಿೂ ಬಾಳು ಬಿಟವದರ ವಿವರಣೆಯ
ಹೊರೆ ನಮ್ಮ ಮೇಲಿಲ್ಲ ನಾವದರ ಸಿರಿಯ
ಹಿಂದಾಗಿಸಲು ನಿಂತು ಯುಕ್ತಿಯಿಂ
ದುಡಿಯುವುದೆ
ಪುರುಷಾರ್ಥ ಸಾಧನೆಯು–ಮಂಕುತಿಮ್ಮ

ಸಂಸಾರ ವೆಂಬುದು ಚಿತ್ತ ಸಂಸ್ಕಾರ ಸಾಧನೆ ಧರಿಸಿರ್ಪುದೆ ಧರ್ಮವಾದುದರಿಂದ ಜೀವನಧುರವನ್ನು ಧರಿಸಬೇಕು. ವಿಧಿಯು ನಮ್ಮ ಬೇಡಿಕೆಯನ್ನು ಮನ್ನಿಸಲು ಅಥವಾ ಭಿನ್ನಿಸಲು ಬೀಳುವವರೆಗೆ ಹೋರಾಡಿ ಸತ್ಯವನ್ನು ಮೆರೆಸಬೇಕು.

ಇರುವ ಕೆಲಸವ ಮಾಡು ಕಿರಿದೆನದೆ ಮನವಿಟ್ಟು
ದೊರೆತುದ ಹಸಾದವೆಂದುಣ್ಣು ಗೊಣಗುಡದೆ
ಧರಿಸು ಲೋಕದ ಭರವ ಪರಮಾರ್ಥವನು
ಬಿಡದೆ
ಹೊರಡು ಕರೆ ಬರಲಳದೆ–ಮಂಕುತಿಮ್ಮ

ಈ ರೀತಿಯ ಜೀವನ ಧ್ಯೇಯ ವಿಟ್ಟು ಕೊಂಡು ಬಾಳುವಾಗಲೂ ಮನುಷ್ಯನಿಗೆ ಆಸೆ, ಹೊಟ್ಟೆಕಿಚ್ಚು ಕೀರ್ತಿಯ ಲಾಲಸೆ ಮೊದಲಾದ ನೂರಾರು ಆತಂಕಗಳು ಎದುರಾಗುತ್ತದೆ. ಇವುಗಳನ್ನು ನಿಭಾಯಿಸಬೇಕು. (37 ನೇ ಪುಟ ನೋಡಿ)

---

14ನೇ ಪುಟದಿಂದ )

...ತಾಯಾ ರಾಮ ತೇ ಶಕ್ತೇಃ ಚಾರುನೂಪುರಮೋಧ್ವನಿಃ ।
...ಸ್ಯಂಜಿತಾ ಸೂಚಿತಂ ತ್ವಸ್ಯ ಲೋಕಸ್ಯ ಸ್ಥಿತಿಸಂತತಿಮ್ ॥ ೧೯ ॥

ರಾಮ ನಿನ್ನಯ ಶಕ್ತಿ ಸೀತೆಯಾಗಿಹಳು
ನೂಪುರದ್ವಯಧ್ವನಿಯು ಅವಳ ನಡಿಗೆಯಲಿ ।
ಕಿವಿಗಿಂಪು ಧ್ವನಿಯದು ಸೂಚಿಸುತ್ತಿಹುದು
ಲೋಕದಸ್ಥಿತಿಯ ನಡೆ ಶಾಶ್ವತವು ಎಂದು ॥

ಪೀತಾಂಬರಧರೋ ರಾಮ ಹಿರಣ್ಯಾಂಡಪ್ರಬೋಧನೇ ।
ಸಮೃದ್ಧೇಃ ಸೂಚಕೋಽಸ್ಯೇವಂ ಸರ್ವಧಾತುಪ್ರವರ್ತಕ ॥ ೨೦ ॥

ನೀನು ಪೀತಾಂಬರವನುಟ್ಟಿರುವೆ ರಾಮ
ಹಿರಣ್ಯಗರ್ಭವನು ಸೂಚಿಸಲು ದೇವ ।
ಸಮೃದ್ಧಿ ಸೂಚಕ ನೀನು ಈ ರೀತಿಯಲ್ಲಿ
ನೀ ಪ್ರವರ್ತಕನೆಲ್ಲ ಧಾತುಗಳ ರಾಮ ॥

ದಿವ್ಯಾಂಬರಧರಾ ಸೀತಾ ತವ ಶ್ರೀ ರಾಮ ನಿತ್ಯಶಃ ।
ಆದಿಶಕ್ತ್ಯತ್ರ ಸಾನಂದಂ ಸಯಶೋ ಜೀವನಂ ಚಿರಮ್ ॥ ೨೧ ॥

ನಿನ್ನ ಸಿರಿಯೇ ಸೀತೆ ಓ ರಾಮದೇವ
ನಿತ್ಯವೂ ತಾ ದಿವ್ಯ ವಸ್ತ್ರಧಾರಿಣಿಯು ।
ಇದು ಕೃಪೆಯ ಸೂಚಿಸಲು ಆನಂದದಿಂದ
ಇರುವ ಕೀರ್ತಿಯು ಪಡೆದ ಚಿರದ ಜೀವನದ ॥

ಸೌರವ್ಯೂಹಾಸ್ತ್ವಸಂಖ್ಯಾಸ್ತೇ ಸೀತಾರಾಮ ವಿಭಾಸ್ವರಾಃ ।
ಅರ್ಘಾತೀತಾನಿ ರತ್ನಾನಿ ಭೂಷಣಾನಾಂ ಜಗತ್ಪ್ರಭೋ ॥ ೨೨ ॥

ನಿನ್ನ ಆಭರಣಗಳ ರತ್ನಗಳ ಬೆಲೆಯು
ನಿಲುಕಲಾರದು ನಮಗೆ ಜಗದೊಡೆಯನೆ ।
ಸಂಖ್ಯೆಗೆಟುಕದೆ ನಿತ್ಯ ಹೊಳೆಯುತ್ತಲಿರುವ
ಸೌರವ್ಯೂಹಗಳವು ದಿಟವು ಶ್ರೀರಾಮ ॥

ಭಕ್ತಾನಾಂ ಸುಮನೋಮಾಲೇ ಧಾರಿತೇ ಸರ್ವವತ್ಸಲ ॥
ಸೀತಯಾ ಚ ತ್ವಯಾ ರಾಮ ನಕ್ಷತ್ರಾಭರಣೋಪರಿ ॥ ೨೩ ॥

ರಾಮ ನಿನ್ನಯ ಮತ್ತು ಸೀತೆಯಾಭರಣಗಳು
ನಕ್ಷತ್ರಖಚಿತಗಳು ಸರ್ವವತ್ಸಲನೆ ।
ನೀವು ಧರಿಸಿರುವಿರಿ ಅವುಗಳ ಮೇಲೆ
ನಿನ್ನ ಭಕ್ತರ ಹೂವು–ಮನಸುಗಳ ಮಾಲೆ ॥

ರಾಮ ತ್ವತ್ಕಿರೀಟದ್ಯುಗ್ರಾಽಭಯಸ್ತೇ ದಕ್ಷಿಣಃ ಕರಃ ।
ವಾಮಸ್ತೇ ವರದಃ ಶಕ್ತೇಃ ಸಚ್ಚಿದಾನಂದ ಸಂಪ್ರದಃ ॥ ೨೪ ॥

ನಿನ್ನ ದಕ್ಷಿಣ ಹಸ್ತ ರಾಮ ಅಭಯಪ್ರದವು
ನನ್ನ ರಕ್ಷಿಸಲು ಅರಿವರ್ಗದಿಂದ ।
ನಿನ್ನ ಶಕ್ತಿಯ ಎಡದಹಸ್ತ ವರದಪ್ರದವು
ಸಚ್ಚಿದಾನಂದತ್ವವನು ನೀಡಲೆನಗೆ ॥

ಪದ್ಮಂ ವಾಮಕರೇ ರಾಮ ಸ್ಪಷ್ಟಂ ತತ್ಸೀತಯಾಚ ನಃ ।
ಪಯೋಯೋಗ್ಯಂ ಪವಿತ್ರಂ ಚ ದದ್ಯಾತ್ಸಾರ್ಥಂ ಸುಖಂ ಸದಾ ॥ ೨೫ ॥

ನಿನ್ನ ಎಡಗೈಯಲ್ಲಿ ಕಮಲವಿದೆ ರಾಮ
ಅದನು ಮುಟ್ಟಿದ್ದಾಳೆ ಸೀತೆ ಬಲಗೈಲಿ ।
ನಮಗೆ ನೀಡಲಿ ಅದು ಪ್ರಾಯಃಕನಗುಣದ
ಪೂರ್ತಸುಖವನು ನಿತ್ಯವೈಶ್ವರ್ಯದೊಡನೆ ॥

ಉಗ್ರಂ ಭವತು ತೇ ಸ್ವಸ್ಥಕೋದಂಡಂ ಸಶರಂ ಪ್ರಭೋ ।
ನಿತ್ಯಂ ಮೇ ಭೌತಿಕಾಧ್ಯಾತ್ಮವೈರಬುದ್ಧಿ ವಿನಾಶನೇ ॥ ೨೬ ॥

ನಿನ್ನ ಕೋದಂಡವದು ಸ್ವಸ್ಥವಾಗಿದೆ ಪ್ರಭುವೆ
ಉಗ್ರವಾಗಲಿ ಅದು ಶರಸಹಿತವಾಗಿ ।
ನನ್ನ ಏಸನಿತ್ಯದ ಭೌತಿಕಾಧ್ಯಾತ್ಮಗಳ
ವೈರಭಾವನೆಗಳನು ಸಂಪೂರ್ಣ ಸುಡಲು ॥

ಆತನೋತು ವಿಶಾಲಾಕ್ಷ ತವ ಗಂಭೀರಮಾನನಮ್ ।
ಮಯಿ ರಾಮ ಮಹದ್ಧೀರಂ ತೇಜಸ್ಸರ್ವಸುಖಾವಹಮ್ ॥ ೨೭ ॥

ವಿಶಾಲನಯನನು ನೀನು; ಓ ರಾಮದೇವ
ಗಂಭೀರವಾಗಿಹುದು ನಿನ್ನ ಮುಖಭಾವ ।
ಅದು ಮಹದ್ಧೀರರ ಸರ್ವಸುಖಕಂದ
ದಿವ್ಯತೇಜಸ್ಸನ್ನು ಬೆಳಗಲೆನ್ನಲ್ಲಿ ॥

ಶಕ್ತಿಸ್ತೇ ರಾಮ ಸೀತಾಯಾಃ ಸಸ್ಮಿತಂ ವದನೋತ್ಪಲಮ್ ।
ಪ್ರತನೋತು ಮಹಾದೇವ ಸಂತೃಪ್ತಿಂ ಮಯಿ ಶಾಶ್ವತೀಮ್ ॥ ೨೮ ॥

ನಿನ್ನ ಶಕ್ತಿಯು ದೇವಿ ಜಾನಕಿಯು ರಾಮ
ಮುಗುಳುನಗೆ ಸೂಸುತಿದೆ ಆವಳ ಮುಖಕಮಲ ।
ನನ್ನಲ್ಲಿ ಶಾಶ್ವತದ ಪೂರ್ಣತೃಪ್ತಿಯನು
ಉಂಟುಮಾಡಲಿ ಅದು ಓ ದೇವ ದೇವ ॥

ಉನ್ನತಂ ತೇ ಕಿರೀಟಂ ಭೋ ರಾಮ ಸರ್ವಾತ್ಮಯೋಜಕ ।
ಪ್ರತಿಷ್ಠಾಪಯತು ಖ್ಯಾತಿಂ ಲೋಕೇ ಸತ್ಕರ್ಮಜಾಂ ಮಮ ॥ ೨೯ ॥

ಜೀವಾತ್ಮರೆಲ್ಲರನು ನಿನ್ನ ಯೋಜನೆಯಂತೆ
ನಡೆಸುವವನೆ ರಾಮ ನಿನ್ನ ಎತ್ತರದ ।
ಕಿರೀಟವೀ ಲೋಕದಲಿ ನನ್ನ ಸತ್ಕರ್ಮಗಳ
ಕೀರ್ತಿಯನು ಚಿರವಾಗಿ ನೆಲೆಗೊಳಿಸಲಿ ॥

ಉತ್ಸಾಹಪ್ರಭುಮಂತ್ರಾಣಾಂ ಶಕ್ತೀಃ ಪ್ರೇರಕಮುತ್ತಮಮ್ ।
ದದ್ಯಾತ್ತೇಷಾಂ ಚ ಸಿದ್ಧಿಂ ಮೇ ಮುಕುಟಂ ರಾಮ ತೇ ಶ್ರಿಯಃ ॥ ೩೦ ॥

ರಾಮನೆ ನಿನ್ನ ಸರಿ ಜಾನಕಿಯ ಮುಕುಟವು
ಉತ್ಸಾಹ–ಪ್ರಭು–ಮಂತ್ರಶಕ್ತಿ ಪ್ರೇರಕವು ।
ಉತ್ತಮದ ಮುಕುಟವದು ನನಗೆ ಆ ಶಕ್ತಿಗಳ
ಸರ್ವಸಿದ್ಧಿಗಳನ್ನು ಒಡನೆ ಕೊಡಲೀಗ ॥

ಆಚಷ್ಟೇ ರಾಮ ಶಸ್ತಂ ಚ ಜೀವನಂ ಚಾರು ಶೀತಲಮ್ ।
ಜಗತ್ಪೋಷಣಶೀಲತ್ವಂ ನೀಲಮೇಘತನುಸ್ತವ ॥ ೩೧ ॥

ನೀಲಮೇಘದ ಬಣ್ಣದಲಿ ನಿನ್ನ ದೇಹ
ರಾಮ ಇದು ಲೋಕಪೋಷಣೆಯ ಗುರುತು ।
ಸುಂದರದ ಶೀತಲದ ಮತ್ತು ಕೀರುತಿಯ
ಜೀವನದ ಸೂಚಕವು ಈ ನಿನ್ನ ದೇಹ ॥

ಶ್ರಿಯಸ್ತೇ ರಾಮ ಸೀತಾಯಾಃ ವಪುರ್ವಿದ್ಯುಲ್ಲತಾಪ್ರಭಮ್ ।
ಸಂಪ್ರೇರಯತು ಸದ್ವೃತ್ತಿಂ ನಿರ್ಭೀತಂ ಚಾನಘಂ ವಸು ॥ ೩೨ ॥

ಮಿಂಚುಗಳ ಬಳ್ಳಿಯ ಪ್ರಭೆಯ ದೇಹವು ರಾಮ
ಸೀತೆಯದು ನಿನ್ನ ಸಿರಿ ಸತಿಯು ಆಕೆ ।
ಆ ತನುವು ಕರುಣಿಸಲಿ ಸದ್ವೃತ್ತಿಯನ್ನು
ನಿರ್ಭೀತ–ನಿಷ್ಪಾಪವೈಶ್ವರ್ಯವನ್ನು

ಸುಮಿತ್ರಾ ಲಕ್ಷ್ಮಣೋ ಭ್ರಾತಾ ರಾಮ ತ್ವತ್ಸುಖತತ್ಪರಃ
ಸುಮೈತ್ರಿಬೋಧಕೋ ನೂನಂ ನಿತ್ಯಂ ಬ್ರಹ್ಮರತೋವ್ರತೀ ॥ ೩೩ ॥

ಸುಮನದವ ನಿನ್ನನುಜ ಲಕ್ಷ್ಮಣನು ರಾಮ
ನಿನ್ನ ಸುಖಕೆಂದವನ ಜೀವನವು ಮುಡಿಪು ।
ಒಳ್ಳೆ ಗೆಳೆತನಕಾತ ಸಂಕೇತವಾಗಿಹನು
ನಿತ್ಯವೂ ಬ್ರಹ್ಮರತವ್ರತದವನು ಅವನು

ಮನನಕ್ರಿಯಯಾ ರಾಮ ಲಕ್ಷ್ಯತೇ ಲಕ್ಷ್ಮಣೋ ಮಹಾನ್
ನಿವೇಶಯ ಮಯಿ ತ್ವಂ ತಂ ತವಾಂಶಂ ಕೃಪಯಾ ಪ್ರಭೋ ॥ ೩೪ ॥

ಮಹಿಮೆಯುಳ್ಳವನವನು ಲಕ್ಷ್ಮಣನು ರಾಮ
ಮನನಕ್ರಿಯೆಯಿಂದಾಗಿ ಆತ ಲಕ್ಷಿತನು ।
ನಿನ್ನ ಅಂಶವು ಆತ ನೀನು ಅವನನ್ನು
ನನ್ನಲ್ಲಿ ನೆಲೆಗೊಳಿಸು ಕೃಪೆಯಿಂದ ದೇವ ॥

ಜೀವೀ ಭುವಿರತೋ ಲೋಕೇ ಸರ್ವಕರ್ಮಾರ್ಪಣವ್ರತಃ ।
ಶುದ್ಧಾಹಂಭಾವಭೂತೋಽಸೌ ಭರತೋ ರಾಮ ತೇಽಂಶಜಃ ॥ ೩೫ ॥

ಭರತನೂ ನಿನ್ನಂಶ ರಾಮ ಲೋಕದಲಿ
ಸರ್ವಕರ್ಮಗಳನ್ನು ನಿನಗೆ ಅರ್ಪಿಸುವ
ವ್ರತಧಾರಿ ಸಂಸಾರಿ ಜೀವಿಯಿವನು
ಶುದ್ಧವೆನಿಸಿದ ಅಹಂಭಾವಿಯಾಗಿಹನು ॥

ಗುರೋಸ್ತೇ ಪಾದಸೇವೇತಿ ಸರ್ವಕರ್ತವ್ಯತತ್ಪರಮ್ ।
ಭರತಂ ಮಯಿ ಸಂಸ್ಥಾಪ್ಯ ಕುರು ಮಾಂ ಭುವಿ ಸಾರ್ಥಕಮ್ ॥ ೩೬ ॥

ಹಿರಿಯಣ್ಣ ನೀ ನಿನ್ನ ಪಾದಸೇವೆಯು ಎಂದು
ಸರ್ವಕರ್ತವ್ಯದಲಿ ನಿರತನಿವನು ।
ಸ್ಥಾಪಿಸೀ ಭರತನನು ನನ್ನಲ್ಲಿ ರಾಮ
ಪೃಥ್ವಿಯಲಿ ನನ್ನನ್ನು ಪರಿಪೂರ್ಣಗೊಳಿಸು ॥

ಶತ್ರುಘ್ನೋ ನಿತ್ಯಶತ್ರುಘ್ನಃ ಶುದ್ಧಚಿತ್ತಾವಬೋಧಕಃ ।
ಶುದ್ಧಾಹಂಕಾರನಿಷ್ಠೋಽಸೌ ರಾಮ ತೇ ಚೇತನಾಂಶಜಃ ॥ ೩೭ ॥

ಶತ್ರುಘ್ನನೆಂದರೆ ನಿತ್ಯಶತ್ರುಗಳನ್ನು
ನಾಶಗೊಳಿಸುವ ತತ್ತ್ವ ಅದು ಶುದ್ಧ ಚಿತ್ತ ।
ಶುದ್ಧವೆನಿಸಿದ ಅಹಂಕಾರದಲ್ಲಿನ ನಿಷ್ಠ
ರಾಮ ಈತನು ನಿನ್ನ ಚೇತನದ ಅಂಶ ॥

(ಸಶೇಷ)

# ಶ್ರೀ ರಾಮಾಯಣಂ

**ಶ್ರೀ ಲಕ್ಷ್ಮೀನರಸಿಂಹ ಭಟ್ಟ**

ಲೋಕದಲ್ಲಿ ಅನೇಕ ಹೆಸರುಗಳ ಇತಿಹಾಸ ಪುರಾಣ ಪ್ರಬಂಧಗಳು ಪ್ರಚಾರದ್ದರೂ. ಭಗವದ್ವಾಲ್ಮೀಕಿ ಪ್ರಣೀತವಾದ ರಾಮಾಯಣ ಸರ್ವಾತಿಶಾಯಿಯೆಂದು ರವಿದರ ಸಿದ್ಧಾಂತ. "ವೇದವೇದ್ಯೇ ಪುಂಸಿ ಜಾತೇ ದಶರಥಾತ್ಮಜೇ। ಃ ಪ್ರಾಚೇತಸಾದಾಸೀತ್ ಸಾಕ್ಷಾದ್ರಾಮಾಯಣಾತ್ಮನಾ" ಎಂದು ಸರ್ವತಾನುಯಾಯಿಗಳೂ ಸಮುಕಂಠದಿಂದ ನುಸಂಧಾನ ಮಾಡುವ ಈ ಮುಕ್ತಕ ರತ್ನದಿಂದ ವೇದ ಪ್ರಾದುರ್ಭಾವ ಷತೆ, ಇತಿಹಾಸ ಶ್ರೇಷ್ಠವಾದ ಮಾಯಣಕ್ಕೆ ಹೇಳಲ್ಪಟ್ಟಿದೆ. ಮಾಯಣಂ, ಶ್ರೀ ರಾಮಾಯಣಂ, ಶ್ರೀ ದ್ರಾಮಾಯಣಂ– ಎಂದು ಮೂರು ವಿಧಗಿ ವ್ಯವಹರಿಸಲ್ಪಡುತ್ತದೆ ಈ ಇತಿಹಾಸ. ಶ್ರೀ ಶಬ್ದಪ್ರಯೋಗವಿಲ್ಲದ ಕೇವಲ ರಾಮಾಯಣವೆಂಬ ವ್ಯವಹಾರದ ಬಗೆಗೆ ಲ್ಲಿ ಚರ್ಚಿಸಲಾರೆವು. 'ಶ್ರೀರಾಮಾಯಣಂ', ಶ್ರೀಮದ್ರಾಮಾಯಣಂ' ಎಂಬ ಎರಡು ವ್ಯವಹಾರಗಳಲ್ಲಿ ವಿಶೇಷ ವಿಚಾರವನ್ನು ಮಾಡುತ್ತೇವೆ.

'ರಾಮಸ್ಯ ಅಯನಂ ರಾಮಾಯಣಂ' ಈ ವ್ಯುತ್ಪತ್ತಿಯನ್ನು ಸಕಲರೂ ಬಲ್ಲರು. ರಾಮ ಥೆಯೆಂದು ಅದರ ಅರ್ಥ. ರಾಮಕಥಾ–ಪ್ರತಿಪಾದಕ ಪ್ರಬಂಧಕ್ಕೆ 'ರಾಮಾಯಣ' ಎಂಬ ಹೆಸರು. ಪೂಜ್ಯತೆಯನ್ನು ದ್ಯೋತಿಸಲು ಶ್ರೀಶಬ್ದ, ಶ್ರೀಮಚ್ಛಬ್ದವನ್ನು ಜೋಡಿಸುತ್ತಾರೆ. ಶ್ರೀ ಭಾಗವತಂ, ಶ್ರೀಮದ್ಭಾಗವತಂ, ಶ್ರೀ ಭಾಷ್ಯಂ, ಶ್ರೀಮದ್ಭಾಷ್ಯಂ ಇತ್ಯಾದಿ ವ್ಯವಹಾರಗಳಂತೆ ಇಲ್ಲಿಯೂ ಶ್ರೀ ರಾಮಾಯಣಂ, ಶ್ರೀಮದ್ರಾಮಾಯಣಂ ಎಂಬ ಎರಡೂ ವ್ಯವಹಾರಗಳು ಸರಿಯೆಂದು ಹಲವರು ಅಭಿಪ್ರಾಯ ಪಡುತ್ತಾರೆ.

ರಾಮನ ಕಥೆಯಂತೆ ಸೀತೆಯ ಕಥೆಯೂ ಪ್ರಾಧಾನ್ಯವೆಂದು ಪೂರ್ವಾಚಾರ್ಯರುಗಳ ಅಭಿಪ್ರಾಯ. ಭಟ್ಟಪಾದರು ಶ್ರೀ ಗುಣರತ್ನ ಕೋಶದಲ್ಲಿ 'ಶ್ರೀಮದ್ರಾಮಾಯಣಮಪಿ ಪರಂ ಪ್ರಾಣಿತಿ ತ್ವಚ್ಚರಿತ್ರೇ' ಎಂದಿದ್ದಾರೆ. ಶ್ರೀ ವಚನಭೂಷಣ ದಿವ್ಯಶಾಸ್ತ್ರದ ಉಪಕ್ರಮದಲ್ಲಿಯೂ–ಇತಿಹಾಸ ಶ್ರೇಷ್ಠೇನ ಶ್ರೀರಾಮಾಯಣೇನ ಲಂಕಾರಾಷ್ಟ್ರ ವೈದೇಹೀವೈಭವಮುಚ್ಯತೇ'–ಎಂದಿದ್ದಾರೆ. ಹೆಚ್ಚೇನು? 'ಕಾವ್ಯಂ ರಾಮಾಯಣಂ ಕೃತ್ಸ್ನಂ ಸೀತಾಯಾಶ್ಚರಿತಂ ಮಹತ್' ಎಂದು ವಾಲ್ಮೀಕಿಯೇ ಹೇಳಿದ್ದಾರೆ. ಆದ್ದರಿಂದ 'ಶ್ರೀ ರಾಮಾಯಣಂ' ಎಂಬ ವ್ಯವಹಾರ ಔಚಿತ್ಯಯುಕ್ತವಾದುದು. ಶ್ರೀಶ್ಚ ರಾಮಶ್ಚ ಶ್ರೀರಾಮೌ – ತಯೋಃ ಅಯನಂ ಶ್ರೀರಾಮಾಯಣಂ – ಎಂದಾಗುತ್ತದೆ. ಶ್ರೀಮದ್ರಾಮಾಯಣ ಎಂಬ ವ್ಯವಹಾರದಲ್ಲಿ ರಾಮನಿಗೆ 'ಶ್ರೀ' ವಿಶೇಷಣವಾಗಿ ಅನ್ವಯಿಸುತ್ತದೆ. ವಿಶೇಷಣಕ್ಕೆ ಅಪ್ರಾಧಾನ್ಯ. ಆದುದರಿಂದ ಉಭಯ ಪದಾರ್ಥ ಪ್ರಧಾನವಾದ ದ್ವಂದ್ವ ಸಮಾಸವನ್ನು ಆಶ್ರಯಿಸುವುದರಿಂದಲೇ ಸಮಪ್ರಾಧಾನ್ಯ ಲಾಭವಾಗುವುದರಿಂದ ಆ ದ್ವಂದ್ವ ಸಮಾಸ ಯೋಗ್ಯವಾದ 'ಶ್ರೀ ರಾಮಾಯಣಂ' ಎಂಬ ವ್ಯವಹಾರವೇ ಉಚಿತವಾದುದೆಂದು ಅನೇಕರು ಅಭಿಪ್ರಾಯ ಪಡುತ್ತಾರೆ.

ರಾಮಚರಿತ ಬಹುಲವಾದ ಗ್ರಂಥವಲ್ಲಿ ಸೀತೆಯ ಚರಿತ್ರೆ ಹೇಗೆ ಪ್ರಧಾನವೆಂದು ಹಲವರು ಪ್ರಶ್ನಿಸಬಹುದು. ಲಕ್ಷ್ಮೀ ಸಾಹಿತ್ಯದಿಂದಲೇ ಭಗವಂತನಿಗೂ ಉತ್ಕರ್ಷವೆಂದು ಆಚಾರ್ಯರ ಅಭಿಪ್ರಾಯ. 'ತವ ಸ್ಪರ್ಶಾದೀಶಂ ಸ್ಪೃಶತಿ ಕಮಲೇ! ಮಂಗಲಪದಂ, ತವೇದಂ ನೋಪಾಧೇರುಪನಿ ಪತಿತಂ ಶ್ರೀ ರಸಿಯತ್!; 'ಅಪಾಂಗಾ ಭೂಯಾಂಸೋ ಯದುಪರಿ ಪರಂ ಬ್ರಹ್ಮ ತದಭೂತ್' ಇತ್ಯಾದಿ ಶ್ಲೋಕಗಳನ್ನು ಇಲ್ಲಿ ಉದಾಹರಿಸಬಹುದು. ಶ್ರೀ ರಾಮಾಯಣದಲ್ಲಿನ ಮಾರೀಚನ ವಚನವೂ 'ಅಪ್ರಮೇಯಂ ಹಿ ತತ್ತೇಜೋ ಯಸ್ಯ ಸಾ ಜನಕಾತ್ಮಜಾ' ಇವನ್ನೇ ಸಮರ್ಥಿಸುತ್ತದೆ. ಲಕ್ಷ್ಮಿಯು ಗುಣಾತಿಶಯ ಪ್ರಕಾಶನಕ್ಕಾಗಿಯೇ ಶ್ರೀ ರಾಮಾಯಣದ ಅವತಾರ. 'ರಾಘವತ್ವೇಽಭವತ್ ಸೀತಾ' ಎಂಬ ಪುರಾಣೋಕ್ತಿಯಂತೆ ಲಕ್ಷ್ಮಿಯೇ ಸೀತಾದೇವಿಯ ಅವತಾರದಿಂದ ರಾಘವನ ಸಹಧರ್ಮಚಾರಿಣಿಯಾಗಿ ದುಃಸಹವಾದರೂ ರಾಮ ವಿಯೋಗವನ್ನು ತಾನಾಗಿ ಅಪೇಕ್ಷಿಸಿ ವಿಯುಕ್ತಳಾದಳು. 'ಸುಂದರೀ ರಘುನಾಥಸ್ಯ ಸುರಸ್ತ್ರೀ ದುಃಖ ಶಾಂತಯೇ। ದಶಾನನಸ್ಯ ಭವನೇ ದಶಮಾಸಾನುವಾಸ ಹ।' ಎನ್ನುತ್ತಾರೆ ಮರ್ಮವಿದರು. ಸ್ವಯಂ ಸೀತಾದೇವಿಯೇ 'ಅಸಂದೇಶಾತ್ತು ರಾಮಸ್ಯ ತಪಸಶ್ಚಾನುಪಾಲನಾತ್। ನ ತ್ವಾಂ ಕುರ್ಮಿ ದಶಗ್ರೀವ! ಭಸ್ಮ ಭಸ್ಮಾರ್ಹ ತೇಜಸಾ॥' ಎನ್ನುತ್ತ ತನ್ನ ಶಕ್ತ್ಯತಿಶಯವನ್ನು ತಾನೇ ಉದ್ಘಾಟಿಸುತ್ತಾಳೆ. ಈ ರೀತಿಯ ಶಕ್ತಿ ವಿಶೇಷದಿಂದ ಕೂಡಿದ್ದರೂ ಆಕೆ ಪಂಚವಟಿಯ ಪರ್ಣಶಾಲೆಯ ಎದುರೇ ದಶವದನನನ್ನು ತನ್ನ ತೇಜಸ್ಸಿನಿಂದ ಭಸ್ಮ ಮಾಡಲು ಸಮರ್ಥಳಾದರೂ, ಅಶಕ್ತ್ಯಾದ್ಯಭಿನಯದಿಂದ ಅವನ ಅಪಹಾರಕ್ಕೊಳಗಾಗಿ "ಹಿಮಹತ ನಲಿನೀವ ನಷ್ಟಶೋಭಾ ವ್ಯಸನಪರಂಪರಯಾತಿ ಪೀಡ್ಯಮಾನಾ। ಸಹಚರರಹಿತೇವ ಚಕ್ರವಾಕೀ ಜನಕಸುತಾ ಕೃಪಣಾಂ ದಶಾಂ ಪ್ರಪನ್ನಾಂ" ಇತ್ಯಾದಿ ನಿರ್ವೇದೋಕ್ತಿಗಳಿಗೆ ಲಕ್ಷ್ಯಭೂತಳಾಗಿ ದುಃಸಹಗಳಾದ ದುಃಖಗಳನ್ನನುಭವಿಸಿದಳು. ಇದು ಆಕೆಯ ನಿರತಿಶಯ ಕೃಪಾಗುಣವನ್ನು ಆವಿಷ್ಕರಿಸುವುದೆಂದು ರಸಿಕ ವಿದ್ವಾಂಸರು ತಿಳಿಯದಿರಲಾರರು.

ಭಗವಂತ 'ದಯಾಳು, ಕ್ಷಮಾನಿಧಿ, ಆಶ್ರಿತವತ್ಸಲ' ಎಂದು ಕರೆಯಲ್ಪಡುತ್ತಾನೆ. ಇವೆಲ್ಲವೂ 'ಶ್ರೀ' ಸಂಬಂಧದಿಂದಲೇ ಎಂದು ಸೂರಿಗಳು ಅಭಿಪ್ರಾಯ ಪಡುತ್ತಾರೆ. ಆದುದರಿಂದ ರಾಮಾಯಣದಲ್ಲಿ ಸೀತಾದೇವಿಯ

# ಭಕ್ತಿಗೀತೆಗಳ ಕ್ಯಾಸೆಟ್‌ಗಳ ಸಮರ್ಪಣೆ

ಕನ್ನಡ ಹರಿದಾಸರ ಅನ್ನಮಾಚಾರ್ಯರ ಅಪೂರ್ವ ಸಾಹಿತ್ಯಸೃಷ್ಟಿ
ಕಮನೀಯ ಗಾನಕಲಾಕೋವಿದರ ಸರಸ ಸಂಗೀತ ಸುಧಾವೃಷ್ಟಿ

ಕಲಿಯುಗ ಪ್ರತ್ಯಕ್ಷ ದೈವವಾದ ಶ್ರೀವೆಂಕಟೇಶ್ವರಸ್ವಾಮಿಯನ್ನು ಕೊಂಡಾಡುತ್ತ
ಕರ್ನಾಟಕ ಹರಿದಾಸರು, ತಾಳ್ಳಪಾಕ ಅನ್ನಮಾಚಾರ್ಯರು ರಚಿಸಿದ
ಆಧ್ಯಾತ್ಮ ಸಂಕೀರ್ತನೆಗಳ ಸಂಪುಟ.

## ಕನ್ನಡ

**ತಿರುಮಲೆಯ ಚೆಲುವ**
–ಗಾಯನ: ಶ್ರೀಮತಿ ವಾಣಿಜಯರಾಂ
ನಂ. 3004 ಹಿ–60

**ಮೂರು ನಾಮಗಳ ಮೂರುತಿ**
–ಗಾಯನ: ಶ್ರೀಮತಿ ಸಿ. ಸರೋಜ, ಸಿ. ಲಲಿತ
ನಂ 3005 ಹಿ–60

**ಶ್ರೀನಿವಾಸ ತತ್ತ್ವ**
ಗಾಯನ: ಬೆಳ್ಳೂರು ಸೋದರಿಯರು
ನಂ. 3006 ಹಿ–60

**ಭಳಿರೆ ತಿರುಮಲರಾಯ**
ಗಾಯನ: ಶ್ರೀ ಆರ್.ಕೆ. ಶ್ರೀಕಂಠನ್
ನಂ. 3007 ಹಿ–60

**ಗೋವಿಂದ ಮಿಠಾಯಿ**
ಗಾಯನ: ಶ್ರೀಮತಿ ರತ್ನಮಾಲಾಪ್ರಕಾಶ್
ನಂ. 3008 ಹಿ–60

**ಗೋವಿಂದ ಗಾನಾಮೃತ**
ಗಾಯನ. ಸಂತ ಭದ್ರಗಿರಿ ಅಚ್ಯುತದಾಸಜೀ
ನಂ. 3009 ಹಿ–60.

## ತೆಲುಗು

**ಅನ್ನಮಯ್ಯ ಸಂಕೀರ್ತನಕೌಮುದಿ**
ಗಾಯನ: ಶ್ರೀ ಡಿ ಪಶುಪತಿ
ನಂ. 4005 ಹಿ–6

**ಅನ್ನಮಯ್ಯ ಪದಪಾರಿಜಾತಂ**
ಗಾಯನ: ಶ್ರೀ ಡಿ. ಪಶುಪತಿ
ನಂ. 4006 ಹಿ–60

**ಕ್ಯಾಸೆಟ್‌ಗಳು ಎಲ್ಲ ತಿ.ತಿ.ದೇ. ಸಮಾಚಾರ ಕೇಂದ್ರಗಳಲ್ಲೂ ದೊರೆಯುತ್ತವೆ.**

**ಕಾರ್ಯನಿರ್ವಹಣಾಧಿಕಾರಿ.**

ಚರಿತ್ರೆಯೇ ಪ್ರಧಾನವೆಂದು ಹೇಳುವುದು ಸಮಂಜಸವಾಗಿದೆ. ಇದರಿಂದ ರಾಮ ಚರಿತೆ ಅಪ್ರಧಾನವೆಂದು ತಿಳಿಯಬಾರದು. ಸೀತಾಚರಿತೆಯ ಪ್ರಾಧಾನ್ಯಕಥನ ಉಭಯ ಪ್ರಾಧಾನ್ಯಕಥನದಲ್ಲಿ ಪರ್ಯವಸಾನವಾಗುವು ದೆಂದು ತಿಳಿಯಬೇಕು. ಆದುದರಿಂದ ದ್ವಂದ್ವ ಸಮಾಸಯೋಗ್ಯವಾದ ಶ್ರೀ ರಾಮಾಯಣವೆಂಬ ವ್ಯವಹಾರ ಸಾಧು ವಾದುದು.

ಶ್ರೀಮದ್ರಾಮಾಯಣವೆಂಬ ವ್ಯವ-ಹಾರವೂ ಸಾಧುವಾದುದೇ, ಆಗ ರಾಮಸ್ಯ ಅಯನಂ ಎಂಬ ವ್ಯುತ್ಪತ್ತಿಯನ್ನು ಬಿಡ ಬೇಕು. 'ರಾಮಾಯಾ ಅಯನಂ' ಎಂದು ವ್ಯುತ್ಪಾದಿಸಬೇಕು. ರಾಮಾ ಎಂದರೆ ಸೀತೆ. 'ಕಾವ್ಯಂ ರಾಮಾಯಣಂ ಕೃತ್ಸ್ನಂ ಸೀತಾಯಾಶ್ಚರಿತಂ ಮಹತ್' ಎಂಬ ವಾಲ್ಮೀಕಿಯ ಮಾತೂ ಸರಿಹೊಂದುತ್ತದೆ. 'ಶ್ರೀಮತ್'ಪದ ಗ್ರಂಥಕ್ಕೆ ವಿಶೇಷಣ. 'ಶ್ರೀಮತೀ ಚ ಸಾ ರಾಮಾ ಚ' ಎಂಬ ಯೋಜನೆಯಲ್ಲಿ ಚಾರು ತಾತಿಶಯವಿಲ್ಲ. ಆದುದರಿಂದ ಸೀತಾದೇವಿಯ ಚರಿತೆ ಎಂಬ ಅರ್ಥ ಕಾಂಕ್ಷಿತವಾದುದರಿಂದ ಶ್ರೀ ಮದ್ರಾಮಾಯಣವೆಂಬ ವ್ಯವಹಾರವೂ ಸಾಧುವಾದುದು.

ರಾಮ ಸಂಬಂಧವನ್ನು ಬಿಡಬಾರದೆಂದು 'ಶ್ರೀ ರಾಮಾಯಣಂ' ಎಂಬ ವ್ಯವಹಾರ ವನ್ನೇ ಸಾಂಪ್ರದಾಯಿಕರು ಆದರಿಸುತ್ತಾರೆ.

(ಶ್ರೀ ಕಾಂಚೀ ಪ್ರತಿವಾದಿ ಭಯಂಕರ ಅಣ್ಣಂಗರಾಚಾರ್ಯರು ಸಂಸ್ಕೃತ ಭಾಷೆಯಲ್ಲಿ 'ವಾಲ್ಮೀಕಿ ವಾಗಮೃತಂ'ಎಂಬ ಕೃತಿಯನ್ನು ಬರೆದಿದ್ದಾರೆ. ಆ ಕೃತಿರತ್ನದ ಉಪೋದ್ಘಾತದ ಭಾವಾನುವಾದವನ್ನು ಕನ್ನಡಕ್ಕೆ ಶ್ರೀ ಲಕ್ಷ್ಮೀನರಸಿಂಹಭಟ್ಟರು ಮಾಡಿದ್ದಾರೆ.)

*

# ತುಲಸೀ ಮಹಿಮೆ

ಬೃಂದಾವನದಲ್ಲಿ ಸೊಂಪಾಗಿ ಬೆಳೆದಿರುವ, ಗೃಹಿಣಿಯಿಂದ ಅರಶಿನ ಕುಂಕುಮಾದಿಗಳಿಂದ ಪೂಜೆಗೊಂಡ, ತುಳಸೀ ದೇವಿಯನ್ನು ನೋಡಿದ ಮಾತ್ರಕ್ಕೆ ಸಕಲ ದೋಷಗಳನ್ನೂ ಪರಿಹಾರ ಮಾಡಿ ಬೇಡಿದ ವರಗಳನ್ನು ಕೊಡುವಳು. ಮುಟ್ಟಿ ಪೂಜಿಸಿ, ನಮಸ್ಕರಿಸಿದವರನ್ನು ಉದ್ಧಾರ ಮಾಡುವಳು. ಬೇರಿಗೆ ನೀರನ್ನೆರೆದು ಬೆಳೆಸಿದವರಿಗೆ ತನ್ನ ಚಿತ್ತವಲ್ಲಭನಾದ ಶ್ರೀಕೃಷ್ಣನನ್ನು ತೋರಿ ಭವದ ಬೇರಕಿತ್ತು ಬಿಸುಡುವಳು. ತನ್ನ ಕೋಮಲವಾದ ದಳಗಳನ್ನು ಭಕ್ತಿ ಪರಿಪೂರ್ಣತಮನದಿಂದ ಬಿಡಿಸಿ ತಂದು ಶ್ರೀಹರಿಯನ್ನು ಅರ್ಚಿಸಿದವರಿಗೆ ಕಾಮಿತಾರ್ಥದಾಯಿನಿಯಾಗಿದ್ದಾಳೆ. ತುಳಸಿಯ ಕಾಷ್ಠವನ್ನು ತೇಯು ಆ ಗಂಧವನ್ನು ಕೃಷ್ಣನಿಗೆ ಲೇಪಿಸಿದರೆ ವೈಕುಂಠದಲ್ಲಿ ಜ್ಯೇಷ್ಠ ಸ್ಥಾನದಲ್ಲಿ ನಿಲ್ಲಿಸುವಳು. ಹರಿಗೆ ಸಮರ್ಪಿತವಾದ ತುಲಸೀ ನಿರ್ಮಾಲ್ಯವನ್ನು ಕೊರಳಲ್ಲಿ ಧರಿಸಿ,ಕರ್ಣದೊಳಿರಿಸಿದರೆ,ದುರಿತ ರಾಶಿಗಳೆಲ್ಲ ಅಂಜಿ ಓಡಿ, ಹರಿಯು ಅವರನ್ನು ತನ್ನವರೆಂದು ಕೈಹಿಡಿದು ರಕ್ಷಿಸುವನು

ಪ್ರತಿದಿನವೂ ತುಲಸೀ ಪೂಜೆ ಮಾಡುವ ಭಕ್ತರ

ಶ್ರೀಮತಿ ಸುಮನಾಬದರೀನಾಥ್

ದೊರೆಯುವುದು. ಸಿಂಧುಶಯನವನ್ನು ಒಂದು ತುಲಸಿ, ಶ್ರೀಗಂಧಾಕ್ಷತೆಗಳಿಂದ ಪೂಜಿಸಿದರೆ ಕುಂದದ ಭಾಗ್ಯವನ್ನು ಕೊಡುವನು ಭಕ್ಷ್ಯ ಭೋಜ್ಯಗಳನ್ನು ನೈವೇದ್ಯಮಾಡಿ ಲಕ್ಷಬತ್ತಿಯ ದೀಪಗಳನ್ನು ಹಚ್ಚಿ ಅಧೋಕ್ಷಜ ಸಹಿತ ಪೂಜಿಸಲು ಸಾಕ್ಷಾತ್ ಮುಕ್ತಿಯನ್ನೇ ಕೊಡುವನು. ಭಕ್ತಿಯಿಂದ ಪ್ರದಕ್ಷಿಣೆ ನಮಸ್ಕಾರಗಳನ್ನು ಅರ್ಪಿಸಿದರೆ ಶ್ರೀಹರಿಯು ತಾನೊಲಿಯುವನು.ಉತ್ಥಾನ ದ್ವಾದಶಿಯಂದು ಕೃಷ್ಣನಿಗೂ ತುಲಸಿಗೂ ವಿವಾಹ ನಡೆಸಿ ತುಲಸೀ ಸನ್ನಿಧಾನದಲ್ಲಿ ದಾಮೋದರನನ್ನು ಪೂಜಿಸಲು ಉತ್ತಮಗತಿ ಉಂಟಾಗುವುದು. ಹೀಗೆ ಸರಸಿಜನಾಭನ ಸಲಿಗೆಯಗಣಿ,ಶರಣರನ್ನು ಪೊರೆವ ಸದ್ಗುಣೆ, ತಿರುಪತಿ ನಿಲಯ ಶ್ರೀ ಪುರಂದರ ವಿಠಲನ ಚರಣ ಸೇವಕಳಾದ ಚಿನ್ಮಯಿ, ನಿನ್ನ ಮುಟ್ಟಿ ತ್ರಾಹಿ ಎಂಬೆ ಎಂದು ಪುರಂದರದಾಸರು ಭಕ್ತಿಯಿಂದ ಸ್ತುತಿಸಿದ್ದಾರೆ.

ಶ್ರೀವಾದಿರಾಜರು ವೃಂದಾವನ ಸೇವೆಯ ಮಾಡಿದವರಿಗೆ ಭವ ಬಂಧನ ಬಿಡುಗಡೆಯಾಗುವುದು ಎಂದು ಹೇಳಿದ್ದಾರೆ. ಬೆಳಗಾಗ ಏಳುತ್ತಲೆ ತುಳಸಿಯ ದರ್ಶನ ಮಾಡಿ ಕರವ ಮುಗಿದು ಪ್ರದಕ್ಷಿಣೆ, ನಮಸ್ಕಾರ ಮಾಡಿದರೆ ಏಳು ಜನ್ಮ

ಅಂಗಳಕೆ ಭೂಷಣ ತುಳಸೀ ಬೃಂದಾವನ
ದರು ದಾಸಾರ್ಯರು ಮನೆಯಮುಂದೆ
ಪಾಗಿ ಬೆಳೆದು ನಳನಳಿಸುತ್ತಿರುವ ತುಲಸೀ
ಹೃನ್ಮನಗಳಿಗೆ ಆನಂದದಾಯಕ. ಶ್ರೀಕೃಷ್ಣನು
ಮ ಬಂದು ನೆಲೆಸುವ ಪ್ರಿಯದಾಣ.

ೀರೋಧ ಮಥನೋದ್ಭೂತೆಯಾದ ತುಲಸಿ
ಾನ್ ವಿಷ್ಣುವಿಗೆ ಪರಮ ಪ್ರಿಯಳಾದವಳು
ಯೇ ತುಲಸೀಮಾಲೆಯನ್ನು ತನ್ನ ಕೊರಳಲ್ಲಿ
ಧರಿಸಿದ್ದಾನೆ ಅಷ್ಟೇ ಅಲ್ಲ ಭಕ್ತಿಯಿಂದ
ರ್ಪಿಸಿದ ಒಂದು ದಳ ಶ್ರೀ ತುಲಸಿಗೆ ತನ್ನನ್ನೇ
ುವೆನೆಂದು ಶ್ರೀಕೃಷ್ಣ ತುಲಾಭಾರದ ಪ್ರಸಂಗ
ಭಕ್ತಜನರಿಗೆಲ್ಲ ತೋರ್ಪಡಿಸಿದ್ದಾನೆ. ತುಳಸೀ
ವನ್ನು ಭಕ್ತಿಯಿಂದ ಸೇವಿಸಿದವರು ತನಗೂ
ಮ ಪ್ರಿಯರೆಂದು ಅಭಯವಿತ್ತಿದ್ದಾನೆ ಸ್ವಯಂ
ಕುದ ಳೂ ಲೋಕವನ್ನೇ ಪಾವನ ಮಾಡತಕ್ಕ
ು, ದಾನ, ಮಹಾನಿವೇದನ ಮುಂತಾದ
ಸ್ತ ಪುಣ್ಯ ಕಾರ್ಯಗಳಲ್ಲಿಯೂ ಅತ್ಯಾವಶ್ಯ
ು, ಮಹಾವಿಷ್ಣುವಿಗೆ ಪರಮಪ್ರಿಯೆಯೂ,
ಶ್ರೀ ತುಲಸೀ ದೇವಿಯನ್ನು ಹರಿದಾಸರು
ು ಭಕ್ತಿ ಪೂರ್ವಕವಾಗಿ ಸ್ತುತಿಸಿದ್ದಾರೆ. ಅವಳ
ಹಿಮೆಗಳನ್ನು ಪರಿಪರಿಯಾಗಿ ಕೊಂಡಾಡಿ
ರೆ

ವೃಂದಾವನ ದೇವಿ ನಮೋ ನಮೋ ಚೆಲ್ವ
ಂದರ ಧರನ ಮನಃ ಪ್ರಿಯಳೆ ನಮೋ ನಮೋ
ದು ಸ್ತೋತ್ರಗೈದಿರುವ ಪುರಂದರದಾಸರು
ಗಳಕೆ ಭೂಷಣ ಪ್ರಾಯವಾದ ತುಲಸೀಗಿಡ
ನ್ನು ವೃಂದಾವನದಲ್ಲಿ ಬೆಳಸಿದ್ದರೆ ಮುದ್ದು ರಂಗ
ದಲ್ಲಿ ತಾ ನೆಲಸುವನೆಂದಿದ್ದಾರೆ. ಎಲ್ಲಿ ಶ್ರೀ
ಲಸಿಯ ವನವೋ ಅಲ್ಲಿ ಸಿರಿನಾರಾಯಣರು
ರ್ಪ್ಪವರು. ಗಂಗೆ, ಯಮುನೆ, ಗೋದಾವರಿ,
ಣಿಕರ್ಣಿಕೆ, ತುಂಗಭದ್ರೆ, ಕೃಷ್ಣವೇಣಿ
ುಂತಾದ ದಿವ್ಯನದೀ ತೀರ್ಥಗಳೆಲ್ಲವೂ ತುಲಸಿಯ
ಕ್ಷಮೂಲದಲ್ಲಿ ಆನಂದದಿಂದ ನೆಲಸಿವೆ. ಬ್ರಹ್ಮ,
ದ್ರ, ಇಂದ್ರ, ಸೂರ್ಯ, ಚಂದ್ರ, ವಾಯು
ುಂತಾದ ದೇವಾಧಿ ದೇವತೆಗಳಲ್ಲ ಶ್ರೀವಿಷ್ಣುವಿನ
ಜ್ಞೆಯಿಂದ ತರುಮಧ್ಯದಲ್ಲಿ ನಿತ್ಯ ನೆಲಸಿದ್ದಾರೆ.
ುಗ್ವೇದ,ಯಜುರ್ವೇದ, ಸಾಮವೇದ, ಅಥರ್ವಣ
ೇದಗಳು ವೃಕ್ಷಾಗ್ರದಲ್ಲಿವೆ. ತುಲಸಿಯ
ಂದೊಂದು ದಳದಲ್ಲಿ ಶ್ರೀಹರಿಯ ಒಂದೊಂದು
ೂರುತಿ ಆನಂದದಿಂದ ಸಂದಣಿಸಿವೆ.

ಈ ಪರಿಯ ದೇವತಾ ಸಾನ್ನಿಧ್ಯವಿರುವ ತುಲಸಿಯ ಅತುಲನೀಯ ಮಹಿಮೆಯನು ಪುರಂದರ ದಾಸರು-ವೃಂದಾವನವೇ ಮಂದಿರವಾಗಿಹ ಇಂದಿರೆ ಶ್ರೀ ತುಲಸೀ– ಎಂಬ ದೇವರನಾಮದಲ್ಲಿ ಹೀಗೆ ಬಣ್ಣಿಸಿದ್ದಾರೆ– ತುಲಸಿಯ ವನದಲ್ಲಿ ಶ್ರೀಹರಿ ಸ್ಥಿರವಾಗಿ ನೆಲಸಿರುವನೆಂದು ಶ್ರುತಿಗಳು ಸಾರುತ್ತಿವೆ. ತುಲಸಿಯ ದರ್ಶನದಿಂದ ದುರಿತಗಳೆಲ್ಲ ಪರಿಹಾರವಾಗುತ್ತವೆ ತುಲಸಿಯ ಸ್ಪರ್ಶದಿಂದ ದೇಹ ಪಾವನಗೊಳ್ಳುತ್ತದೆ. ತುಲಸಿಯ ಸ್ಮರಣೆಯಿಂದ ಸಕಲ ಇಷ್ಟಾರ್ಥಗಳೂ ಕೈ ಗೂಡುತ್ತವೆ. ಮೂಲ ಮೃತ್ತಿಕೆಯನ್ನು ಶಿರದಲ್ಲಿ ಧರಿಸಿ, ಮಾಲೆಯನ್ನು ಕೊರಳಲ್ಲಿಟ್ಟ ಮನುಜಗೆ ಮುಕ್ತಿ ಮಾರ್ಗ ಸಿದ್ಧಿಸುವುದು. ಐಶ್ವರ್ಯ, ಆರೋಗ್ಯ, ಸಂತಾನ ಸೌಭಾಗ್ಯ, ಸೌಮಂಗಲ್ಯ, ಸಂಪತ್ತುಗಳನ್ನು ಅಪಾರವಾಗಿ ನೀಡಿ ಪುರಂದರ ವಿಠಲನ ಚರಣ ಸ್ಮರಣೆಯನು ಕೊಡುವಳು– ಎಂದು ವರ್ಣಿಸಿದ್ದಾರೆ.



ಪುಣ್ಯವನ್ನು ಏನೆಂದು ಕೊಂಡಾಡಬೇಕು? ಮಿಂದು ಮಡಿಯುಟ್ಟು ತುಲಸಿಗೆ ಉದಕವನ್ನು ಎರೆಯಲು ಮುನ್ನ ಮಾಡಿದ ಪಾಪವೆಲ್ಲವೂ ಪರಿಹಾರವಾಗಿ ಹಿಂದಿನ ಕುಲಕೋಟಿಗಳಿಗೆಲ್ಲ ವೈಕುಂಠ ಪದವಿ

ಗಳ ಪಾಪ ಹಿಂಗುವುದು ತುಲಸಿ ಸನ್ನಿಧಾನವನ್ನು ಸಾರಿಸಿ ರಂಗವಲ್ಲ್ಯಾದಿಗಳಿಂದ ಅಲಂಕರಿಸಿ ಪ್ರತಿದಿನವೂ ನೀರನ್ನೆರೆದು ಪೂಜಿಸಿದವನಿಗೆ ಪರಮ ಪದವಿ ದೊರೆಯುವುದು. ಇದಕ್ಕೆ ಒಂದು ಐತಿಹ್ಯವನ್ನೂ ಹೇಳಿದ್ದಾರೆ- ಒಮ್ಮೆ ಮನೆಗೆ ನೀರು ತರುತ್ತಿದ್ದ ಸೇವಕಿಯೊಬ್ಬಳು ಎಡವಿ ಬಿದ್ದು ಅವಳ ಕೊಡ ಒಡೆಯಿತು. ಆ ನೀರು ಬಿದ್ದು ತುಲಸಿಗೆ ತಂಪಾಯಿತು. ಅದರಿಂದ ಅವಳಿಗೆ ಮೋಕ್ಷದೊರೆಯಿತು. ಹೀಗೆ ಆಕಸ್ಮಿಕವಾಗಿ ಆದ ಕಾರ್ಯದಿಂದಲೇ ಇಷ್ಟು ಪುಣ್ಯ ದೊರೆತಿರುವಾಗ, ಪ್ರತಿನಿತ್ಯವೂ ಶ್ರದ್ಧಾ ಪೂರ್ವಕವಾಗಿ ಸೇವೆ ಸಲ್ಲಿಸಿದವರಿಗೆ ಸಕಲ ಸೌಭಾಗ್ಯಗಳೂ ದೊರೆಯುವುದರಲ್ಲಿ ಆಶ್ಚರ್ಯವೇನು?

ಶ್ರೀ ವ್ಯಾಸರಾಯ ಮಠಾಧೀಶರಾಗಿದ್ದ ಶ್ರೀ ವಿದ್ಯಾಪ್ರಸನ್ನ ತೀರ್ಥರು- ಸ್ವೀಕರಿಸೌ ಪೂಜೆಯ ತುಳಸೀ ಲೋಕೋತ್ತರನರಸೀ- ಎಂದು ಬೇಡಿದ್ದಾರೆ. ನಿನ್ನನ್ನು ಪೂಜಿಸಿ ನನ್ನ ಕೈಗಳು ಧನ್ಯವಾಗಲಿ, ನಿನ್ನನ್ನು ವಂದಿಸಿ ಈ ದೇಹ ಪುನೀತಗೊಳ್ಳಲಿ, ನೀನಿದ್ದಲ್ಲಿ ಹರಿ ತಾನಿರುವನು, ಸುಗಂಧಿತ ಪುಷ್ಪಗಳಿದ್ದರೂ. ನೀನಿಲ್ಲದ ಪೂಜೆ ಹರಿ ತಾನೊಲ್ಲನು, ಬೃಂದಾವನ ಲೋಲನ ವಲ್ಲಭೆ. ಸ್ಪಂದಹಾಸವನ್ನು ತೋರಿ, ಕರುಣಿಸು ಮಾತೇ- ಎಂದು ಸ್ತುತಿಸಿದ್ದಾರೆ. ಹೀಗೆ ಹರಿ ಪ್ರಿಯೆಯಾದ ಶ್ರೀತುಲಸಿ ಹರಿಭಕ್ತರಿಗೆಲ್ಲರಿಗೂ ಆರಾಧ್ಯ ದೇವತೆಯಾಗಿದ್ದಾಳೆ.

ವಿಷ್ಣುಭಕ್ತರ ಮನೆಗಳಲ್ಲಿ ಗೃಹಿಣಿಯರು ಪ್ರಾತಃಕಾಲದಲ್ಲಿ, ಮಿಂದು ಮಡಿಯುಟ್ಟು, ತುಲಸೀ ಬೃಂದಾವನದ ಸುತ್ತ ಸಾರಿಸಿ ರಂಗವಲ್ಲ್ಯಾದಿಗಳಿಂದ ಅಲಂಕರಿಸಿ ತುಲಸಿಯನ್ನು ಅರಶಿನ, ಕುಂಕುಮ, ಅಕ್ಷತೆ ಪುಷ್ಪಾದಿ ಮಂಗಳ ದ್ರವ್ಯಗಳಿಂದ ಪೂಜಿಸುವುದು ಒಂದು ಸಂಪ್ರದಾಯ. ಚಾತುರ್ಮಾಸದಲ್ಲಿ ತುಲಸೀ ಪೂಜೆಗೆ ವಿಶೇಷ ಮಹತ್ತ್ವವುಂಟು. ಆಷಾಢ ಶುದ್ಧ ಏಕಾದಶಿಯಿಂದ ಕಾರ್ತೀಕ ಶುದ್ಧ ದ್ವಾದಶಿಯ ಪರ್ಯಂತ 4 ತಿಂಗಳು ಚಾತುರ್ಮಾಸವೆಂದು ಪ್ರಸಿದ್ಧವಾಗಿದೆ. ಆಷಾಢ ಶುದ್ಧ ಏಕಾದಶಿ- ಶಯನೀ ಏಕಾದಶೀ ಅಂದರೆ ಶ್ರೀ ಮಹಾವಿಷ್ಣುವು ವೈಕುಂಠದಲ್ಲಿ ಅಂದು ಯೋಗ ನಿದ್ರೆಯಿಂದ ಎಚ್ಚರಗೊಳ್ಳುವನು. ಅಂದು ಉತ್ಥಾನ ದ್ವಾದಶಿ. ಪ್ರಾತಃ ಕಾಲದಲ್ಲಿ ಬೃಂದಾವನದಲ್ಲಿ, ಲಕ್ಷ್ಮೀ, ಸರಸ್ವತೀ, ಪಾರ್ವತಿಯರ ಪ್ರತೀಕಗಳಾದ ಆತಸೀ (ಅಗಸೆ) ತುಲಸೀ ಧಾತ್ರೀ (ನೆಲ್ಲಿಪೆಂಡಿ) ಇವುಗಳನ್ನು ಪೂಜಿಸುತ್ತಾರೆ. ಸಾಯಂಕಾಲದಲ್ಲಿ ತುಲಸೀ ಸನ್ನಿಧಾನದಲ್ಲಿ ದಾಮೋದರ (ಮಾಸ ನಿಯಾಮಕ ಶ್ರೀವಿಷ್ಣು)ವಿನ ಪೂಜೆ, ಕೃಷ್ಣನೊಡನೆ ತುಲಸೀ ವಿವಾಹ ಇವು ನಡೆಯುವುವು.

ತುಲಸೀ ವೃಕ್ಷಗಳು ಒಂದೇ ಕಡೆ ಗುಂಪಾಗಿ (ಬೃಂದವಾಗಿ) ಸೇರಿ ಬೆಳೆಯುವುದರಿಂದ ಬೃಂದಾ ಎಂದೂ. ಬೃಂದಾವನ ಎಂಬ ವನದಲ್ಲಿ ಪೂರ್ವದಲ್ಲಿ ಅವಳು ವಾಸ ಮಾಡುತ್ತಿದ್ದುದರಿಂದ ಬೃಂದಾವನೆ ಎಂದೂ, ಜಗತ್ತಿನಲ್ಲಿ ಎಲ್ಲರಿಂದಲೂ ಪೂಜೆಗೊಳ್ಳುವುದರಿಂದ ವಿಶ್ವಪೂಜ್ಯೆ ಎಂದೂ, ಎಲ್ಲರನ್ನೂ, ಎಲ್ಲವನ್ನೂ ಪರಿಶುದ್ಧಗೊಳಿಸಬಲ್ಲವಳಾದ್ದರಿಂದ ವಿಶ್ವಪಾವನೆ ಎಂದೂ, ಪುಷ್ಪಗಳಲ್ಲೆಲ್ಲ ಅತ್ಯಂತ ಶ್ರೇಷ್ಠಳಾದ್ದರಿಂದ ಪುಷ್ಪಸಾರಾ ಎಂದೂ, ಭಕ್ತರಿಗೆ ಪರಮಾನಂದ ಕರಳಾದ್ದರಿಂದ ನಂದಿನೀ ಎಂದೂ, ಈ ಸಮಸ್ತ ಪ್ರಪಂಚದಲ್ಲಿ ತನಗೆ ತುಲನೀಯವಾದ್ದು ಮತ್ತಾವುದೂ ಇಲ್ಲದಿರುವುದರಿಂದ ತುಲಸೀ ಎಂದೂ, ಕೃಷ್ಣನಿಗೆ ಜೀವನ ಸ್ವರೂಪಳಾದ್ದರಿಂದ ಕೃಷ್ಣ ಜೀವಿತೆ ಎಂದೂ, ಪ್ರಖ್ಯಾತಳಾದ ತುಲಸೀಯನ್ನು ಈ ಅಷ್ಟನಾಮಗಳಿಂದ ಪ್ರತಿನಿತ್ಯವೂ ಪೂಜಿಸಿದಲ್ಲಿ ಶ್ರೀ ಹರಿಯ ಚರಣ ಸ್ಮರಣೆಯನ್ನೂ, ಅನವರತ ಕೃಪೆಯನ್ನೂ ಸುಮಂಗಲಿಯರಿಗೆ ದೀರ್ಘ ಸೌಮಂಗಲ್ಯ ಸಂಪತ್ ಸೌಭಾಗ್ಯಗಳನ್ನು ಪ್ರಸಾದಿಸುವ ಶ್ರೀ ತುಲಸಿ ಮನೆ ಮನಗಳಿಗೆ ಮಂಗಳದಾಯಿನಿಯಾಗಿದ್ದಾಳೆ.





(11 ನೇ ಪುಟದಿಂದ)

"ತ್ರೇತಾಯುಗಕ್ಕೆ ಮೊದಲು 'ಸಾಕೇತ' ಎಂಬ ನಗರವಿತ್ತು-ಎಂದೂ ಅನಂತರ ಅದು ಅಳಿದು ಹೋಗಿ ಅಯೋಧ್ಯಾ ನಗರವು ಕಟ್ಟಲ್ಪಟ್ಟಿತು ಎಂದೂ ಅಭಿಪ್ರಾಯಪಡುತ್ತಾರೆ (ಸಾಕೇತ್ ಏಕ್ ಅಧ್ಯಯನ್ ಪುಟ-202).

ಪೂರ್ವ ಕವಿಗಳ ವಿಶಿಷ್ಟ ಸ್ಮರಣೆ: ಗುಪ್ತರು ತಮ್ಮ 'ಸಾಕೇತ' ಕಾವ್ಯದಲ್ಲಿ ಭಾಸ, ಕಾಳಿದಾಸ ಭವಭೂತಿ-ಈ ಮೂವರು ಸಂಸ್ಕೃತ ನಾಟಕಕಾರರನ್ನು ಸ್ಮರಿಸಿದ್ದಾರೆ. ವಾಲ್ಮೀಕಿ ಮತ್ತು ತುಲಸೀದಾಸರನ್ನೂ ವಂದಿಸಿದ್ದಾರೆ. ಇವರಿಬ್ಬರನ್ನು ಸ್ಮರಿಸುವುದು ಸರಿ. ಆದರೆ ತಾವು ಬರೆಯುತ್ತಿರುವ ಹಿಂದೀ ಪದ್ಯ ಕಾವ್ಯದಲ್ಲಿ ಸಂಸ್ಕೃತ ನಾಟಕಕಾರರನ್ನು ಸ್ಮರಿಸಿರುವುದರಲ್ಲಿ ಒಂದು ವಿಶೇಷ ಕಂಡು ಬರುತ್ತದೆ. ಭಾಸನ ಪ್ರತಿಮಾ ನಾಟಕದಲ್ಲಿ- ಭರತನು ಪೂರ್ವಜರ ಪ್ರತಿಮೆಯೊಡನೆ ದಶರಥನ ಪ್ರತಿಮೆಯನ್ನು ಕಂಡಾಗಿನ ಸಂದರ್ಭದಲ್ಲಿ; ಕಾಳಿದಾಸನ ರಘುವಂಶ ಕಾವ್ಯದ ಅಜವಿಲಾಪದಲ್ಲಿ; ಭವಭೂತಿಯ ಉತ್ತರರಾಮ ಚರಿತದಲ್ಲಿ ವ್ಯಕ್ತವಾಗಿರುವ ಕರುಣರಸವನ್ನು, ಗುಪ್ತರು, ತಮ್ಮ ಈ ಕಾವ್ಯದಲ್ಲಿ ಪೂರ್ಣರೂಪದಲ್ಲಿ ಅಭಿವ್ಯಕ್ತಗೊಳಿಸಲು ಉದ್ದೇಶಿಸಿದ್ದಾರೆ.

'ಅಯೋಧ್ಯಾ' ಶಬ್ದ ಪ್ರಧಾನವಾಗಿ ವೀರರಸವನ್ನು ಪ್ರತಿಪಾದಿಸುವುದರಿಂದ ಗುಪ್ತರು ಸಂಕಲ್ಪಿಸಿಕೊಂಡಿರುವ ಕರುಣರಸ ಪ್ರತಿಪಾದನೆಯ ಜಾಯಮಾನಕ್ಕೆ ಅದು ಒಗ್ಗಿ ಬಂದಿಲ್ಲ. 'ಸಾಕೇತ' ಒಗ್ಗಿ ಬಂದಿದೆ. ಆದ್ದರಿಂದಲೇ ಅವರು ಈ ಕಾವ್ಯಕ್ಕೆ 'ಸಾಕೇತ' ಎಂದು ಹೆಸರಿಸಿ, ಸಾರ್ಥಕಗೊಳಿಸಿದ್ದಾರೆ.



# ಚಿತ್ರಕೂಟ

## ಹಾಗೂ

# ಕಿಷ್ಕಿಂಧಾನಗರ

ಯೋಧ್ಯಾಧಿಪತಿಯಾದ ಶ್ರೀರಾಮ ನ ಜೀವನ ಭಾರತೀಯರಿಗಷ್ಟೇ ಅಲ್ಲ ನ, ಥಾಯ್‌ಲ್ಯಾಂಡ, ದಕ್ಷಿಣ, ಮಧ್ಯ ೯ ಏಶಿಯಾ, ಮಲೇಶಿಯಾ, ಬರ್ಮಾ, ಬೋಡಿಯಾ, ಇಂಡೋನೇಷಿಯಾ ಹೀಗೆ ದೇಶದ ಪ್ರಜೆಗಳಿಗೆಲ್ಲ ಚಿರಪರಿಚಿತ ಕಥೆ ಸನ್ 251 ರ ಸುಮಾರಿನಲ್ಲಿ ಭಾಷೆಯಲ್ಲಿ ವಾಲ್ಮೀಕಿಯರಾಮಾಯಣ ಅನುವಾದ ಮಾಡಲಾಯಿತು. 19 ಶತಮಾನದಲ್ಲಿ ಫ್ರಾನ್ಸಿನ ಇಪ್ಪೋಲಿತ್ ಸ್, ಎಂಬ ವಿದ್ವಾಂಸನು ಈ ಗ್ರಂಥ ಭಾಷಾಂತರಿಸಿದ. ಬರಾನ್ನಿಕೋಬ ರಶಿಯನ್ ವಿದ್ವಾಂಸರು ರಾಮಚರಿತ ನಸ ಗ್ರಂಥವನ್ನು ರಶಿಯನ್ ಭಾಷೆಗೆ ವಾದ ಮಾಡಿದರು. ಅವರ ಈ ಗ್ರಂಥಕ್ಕೆ ವಿಯತ್ ಸಂಘದ ಆರ್ಡರ್ ಆಫ್ ನ್ ಪುರಸ್ಕಾರವು ಲಭಿಸಿತು. 1589 ರ ಮಾರಿನಲ್ಲಿ ಮೊಗಲ್ ಚಕ್ರವರ್ತಿ ಅಕಬರ ದಶಹನ ಕಾಲದಲ್ಲಿ ಮುಲ್ಲಾ ಅಬ್ದುಲ್ ದರ್ ಬದಾಯುನಿ ಎಂಬ ಮಹನೀಯರು ಗ್ರಂಥವನ್ನು ಫಾರ್ಶಿ ಭಾಷೆಗೆ ಷಾಂತರಿಸಿದರು. ಇದೆಲ್ಲ ವಿದೇಶದ ತಾದರೆ, ಭಾರತದಲ್ಲಿರುವ ನಾನಾಭಾಷೆ ಗೂ ಪ್ರಾಂತಗಳಲ್ಲಿಯ ಜನರು ಈ ಗ್ರಂಥ ನ್ನು ಎಷ್ಟೆಷ್ಟು ರೀತಿಯಲ್ಲಿ ಭಾಷಾಂತರಿಸಿ ಂಡಿದ್ದಾರೆಂಬುದನ್ನು ಗುರುತಿಸುವುದು ಹು ದೊಡ್ಡ ಶೋಧನಾಕಾರ್ಯವೆಂದೆನಿ ವುದು.

ಶ್ರೀರಾಮನ ಕಥೆಯು ಅಯೋಧ್ಯೆಯಿಂದ ರಂಭ ಮಾಡಿಕೊಂಡು ಲಂಕೆಯವರೆಗೂ ರಡಿ ಪುನಃ ಅಯೋಧ್ಯಾನಗರಕ್ಕೆ ಬಂದು ಮುಟ್ಟುತ್ತದೆ. ಒಂದು ರೂಪದಲ್ಲಿ ಕೆಲವು ಪರ್ವತಗಳನ್ನು ಪ್ರದಕ್ಷಿಣೆ ಹಾಕಿದಂತೆ, ಈ ಪ್ರವಾಸಕಥನವು ಸಾಗುತ್ತದೆ. ಈ ದೀರ್ಘ ಕಾಲದ ಪ್ರವಾಸದಲ್ಲಿ ಭಾರತದುದ್ದಗಲಕ್ಕೂ ಬೆಳೆದು ನಿಂತ ನಿಸರ್ಗದ ವರ್ಣನೆಯೊಂದಿಗೆ ಮಾನವೀಯ ಜೀವನದ ಗುಣಮೌಲ್ಯಗಳ ತುಲನಾತ್ಮಕ ಪರಿಚಯವು ದೊರೆಯುವಂತಾಗುತ್ತದೆ.

ಈ ಪ್ರವಾಸ ಕಾಲದಲ್ಲಿಯ ಎರಡು ಸ್ಥಳಗಳು ಅತಿಮಹತ್ವದ ಕೇಂದ್ರಗಳಾಗಿವೆ. ಅದರಲ್ಲಿ ಮೊದಲನೆಯದು ಚಿತ್ರಕೂಟ ವಾದರೆ ಎರಡನೆಯದು ಕಿಷ್ಕಿಂಧಾನಗರ. (ಇಂದಿನ ಹಂಪಿ) ಚಿತ್ರಕೂಟದಲ್ಲಿ ಶ್ರೀರಾಮ ಚಂದ್ರನನ್ನು ಮರಳಿ ಕರೆದುಕೊಂಡು ಹೋಗಲು ಆತನ ತಾಯಿಯವರು, ರಾಜ ಪರಿವಾರದವರು, ಹಾಗೂ ಮಾನ್ಯ ಇವ ರೆಲ್ಲರೊಂದಿಗೆ ತಮ್ಮನಾದ ಭರತನು ಮಾಡಿದ ಪ್ರಯತ್ನವು ಕರುಣಾಪೂರಿತವಾದ ಅಂತಃ- ಕರಣವನ್ನು ಕಲಕಿಸುವಂತಹ ಸಂದರ್ಭ ಗಳಿಂದ ಕೂಡಿದ ಸ್ಥಳವೆಂದೆನಿಸಿಕೊಳ್ಳುತ್ತದೆ. ಅದೇರೀತಿಯಲ್ಲಿ ಪತ್ನಿಯನ್ನು ಕಳೆದು ಕೊಂಡು ವನವನವ ಸಂಚರಿಸುತ್ತ ಬಂದ ರಾಮಲಕ್ಷ್ಮಣರಿಗೆ ಸುಗ್ರೀವ ಹಾಗೂ ಹನುಮಂತರ ಸಖ್ಯವು ಲಭಿಸಿದುದು ಕಿಷ್ಕಿಂಧಾನಗರವೆನಿಸಿದ ಹಂಪೆಯಲ್ಲಿ. ಚಿತ್ರ ಕೂಟದಲ್ಲಿ ಮಂದಾಕಿನಿಯು ಪ್ರವಾಹವಿದ್ದರೆ ಹಂಪಿಯಲ್ಲಿ ತುಂಗಭದ್ರೆ ಹರಿಯುತ್ತಾಳೆ. ವಾನರ ವೀರರ ಸಖ್ಯದಿಂದ ರಾಮನ ಮನಸ್ಸಿಗೆ ಸಮಾಧಾನ ಸಿಗುತ್ತದೆ. ಮಿತ್ರ ತ್ವಕ್ಕೆ ಪ್ರತಿಯಾಗಿ ರಾಮ ವಾಲಿಯನ್ನು ಸಂಹರಿಸಿ ತನ್ನ ಬಾಹುಬಲವನ್ನು ಪ್ರದರ್ಶಿ ಸುತ್ತಾನೆ. ಹೀಗೆ ಈ ಸ್ಥಳಗಳು ಯುಗ ಯುಗಾಂತರಗಳಿಂದಲೂ ಶ್ರೀ ರಾ ಮ ನ ಜೀವನಕ್ಕೆ ಬಹುದೊಡ್ಡ ಸಾಕ್ಷಿಗಳಾಗಿ ಭಾವುಕರಾದ ರಾಮಭಕ್ತರನ್ನು ಆಕರ್ಷಿಸುವ ಕೇಂದ್ರಗಳಾಗಿ ಇಂದಿಗೂ ಉಳಿದುಕೊಂಡು ಬಂದಿವೆ.

ಅಲಹಾಬಾದಿನಿಂದ ಚಿ ತ್ರ ಕೂ ಟ ಕ್ಕೆ ಪ್ರಯಾಣ ಮಾಡುವಾಗ ವಿಂಧ್ಯಾಚಲದ ಮಧ್ಯಭಾಗದಲ್ಲಿರುವ ಲಾಲಾಪುರ ಎಂಬ ಗ್ರಾಮದ ಸಮೀಪದಲ್ಲಿ ವಾಲ್ಮೀಕಿಮುನಿಗಳ ಆಶ್ರಮವಿತ್ತೆಂದು ಹೇಳ್ತಾರೆ. ಆದರೆ ಆ ಹಿಂದಿನ ಕುರುಹುಗಳು ಇಂದು ಹೇಗೆ ಉಳಿದುಕೊಂಡು ಬರಲು ಸಾಧ್ಯ; ಈ ಪರ್ವತದ ಭಾಗದಿಂದ ಕೆಳಗಿಳಿಯುವಾಗ ಚಿಕ್ಕದಾದ ಒಂದು ದೇವಿಯ ಮಂದಿರವಿದೆ. ಪ್ರತಿವರುಷ ಆ ಸ್ಥಳದಲ್ಲಿ ಬಹುದೊಡ್ಡ ಜಾತ್ರೆ ಯಾಗುತ್ತದೆ. ಶ್ರೀರಾಮಚಂದ್ರನು ಇದೇಸ್ಥಳದಲ್ಲಿ ವಾಲ್ಮೀಕಿ ಮುನಿಗಳಿಗೆ ದರ್ಶನವಿತ್ತನೆಂದು ಹೇಳುತ್ತಾರೆ. ಇನ್ನು ರಾಮಚರಿತಮಾನಸ ಗ್ರಂಥವನ್ನು ರಚಿಸಿದ ತುಲಸೀದಾಸರು ಮಂದಾಕಿನಿ ಪ್ರವಾಹದ ದ ಂ ಡೆ ಯ ಮೇ ಲೆ ವಾಸವಾಗಿದ್ದುಕೊಂಡು ರಾಮಧ್ಯಾನನಿರತರಾಗಿದ್ದರೆಂದು ಹೇಳುವು ದುಂಟು. ವಾಲ್ಮೀಕಿ ಹಾಗೂ ತುಲಸೀದಾಸ ಇವರಿಬ್ಬರಿಗೂ ಚಿತ್ರಕೂಟಪರ್ವತದ ವನ ಸಿರಿಯು ಸ್ಫೂರ್ತಿಯ ಚಿಲುಮೆಯಾಗಿ ಅವರ ಮನವನ್ನೆಲ್ಲ ರಾಮಕಥೆಯ ಕಾರಂಜಿ ಯಿಂದ ತುಂಬಿಕೊಳ್ಳುವಂತೆ ಮಾಡಿದೆ ಎಂಬ ಮಾತನ್ನು ಚಿತ್ರಕೂಟಕ್ಕೆ ಭೇಟಿಯ- ನ್ನಿತ್ತವರು ಮಾತ್ರ ತಿಳಿದುಕೊಳ್ಳಬಹು ದಾಗಿದೆ.

ಒಂದು ಕಾವ್ಯವು ಸಂಸ್ಕೃತದಲ್ಲಿ ರಚನೆ ಯಾದರೆ ಇನ್ನೊಂದು ಕಾವ್ಯವು ಪ್ರಾಕೃತ ಭಾಷೆಯಲ್ಲಿ ರಚನೆಗೊಂಡಿದೆ. ಇವರಿಬ್ಬರಿಗೂ ನಿಸರ್ಗದಲ್ಲಿಯೇ ತಮ್ಮ ಆರಾಧ್ಯದೇವನ ದರ್ಶನವು ಲಭಿಸಿದೆ ಎಂಬ ಮಾತನ್ನು ಕಾವ್ಯಾರಾಧಕರು ಕಂಡುಕೊಳ್ಳಬಹುದು.

ಶ್ರೀ ಆದ್ಯರಾಮಾಚಾರ್ಯ

ಚಿತ್ರಕೂಟಕೇ ಘಾಟಪರ್
ಭಯೀ ಸಂತನಕೀ ಭೀರ್
ತುಲಸೀದಾಸ ಚಂದನ ಘೀಸೆ
ತಿಲಕ ದೇತ ರಘುವೀರ್

ತುಲಸಿದಾಸರ ರಾಮಾಯಣವಾಗಲಿ ಅಥವಾ ಮೂಲ ವಾಲ್ಮೀಕಿ ರಾಮಾಯಣವಾಗಲಿ ಈ ಎರಡೂ ಕೃತಿಗಳು ಭಕ್ತಿರಸ ಗಂಗೆಯ ಓತಪ್ರೋತವಾದ ಪ್ರವಾಹವೆಂದೆನಿಸಿಕೊಳ್ಳುತ್ತವೆ. ವರ್ಷಾಋತುವಿನಲ್ಲಿ ಚಿತ್ರಕೂಟಪರ್ವತವನ್ನು ನೋಡುವುದೇ ಕಣ್ಣಿಗೊಂದು ಹಬ್ಬವೆನಿಸುತ್ತದೆ. ಚಿತ್ರಕೂಟದಲ್ಲಿ ಶ್ರೀರಾಮಚಂದ್ರನು ಮೊಟ್ಟ ಮೊದಲು ಬಾರಿ ಪಿತೃಕಾರ್ಯವನ್ನು ನಡೆಸಬೇಕಾಗುತ್ತದ. ಆ ಸ್ಥಳವನ್ನೂ ಸಹ ತೋರಿಸುತ್ತಾರೆ. ಇನ್ನು ದಕ್ಷಿಣದಲ್ಲಿರುವ ಕಿಷ್ಕಿಂಧೆಯಲ್ಲಿ ತಂದೆಯ ಸಮಾನನಾದ ವಾಲಿಯನ್ನು ಕಳೆದುಕೊಂಡು ರಾಮ ಸಾನ್ನಿಧ್ಯದಲ್ಲಿಯೇ ಪಿತೃಕಾರ್ಯವನ್ನು ಸುಗ್ರೀವನು ಮಾಡುತ್ತಾನೆ. ಸಮಗ್ರ ಚಿತ್ರಕೂಟವನ್ನೆಲ್ಲ ಸುತ್ತಾಡಿಕೊಂಡು ಬರಲು ಕೊನೆಯ ಪಕ್ಷ ಒಂದು ವಾರವಾದರೂ ಬೇಕು. ಅದೇರೀತಿಯಲ್ಲಿ ಕಿಷ್ಕಿಂಧಾನಗರವನ್ನು ಸುತ್ತಾಡಿಕೊಂಡು ಬರಲು ಅನೇಕ ದಿನಗಳು ಹಿಡಿಯುತ್ತವೆ.

ಚಿತ್ರಕೂಟಪರ್ವತದಲ್ಲಿಯ ಮಹತ್ವದ ಸ್ಥಳವೆಂದರೆ ಕಾಮಗಿರಿ ಎಂಬ ಪರ್ವತ ಇಲ್ಲಿ ಮೌನೀ ಅಮಾವಾಸ್ಯೆಯದಿನ ಈ ಪರ್ವತವನ್ನು ಪ್ರದಕ್ಷಿಣ ಹಾಕಿಬರುವ ಸಂಪ್ರದಾಯವಿದೆ. ಶ್ರೀಕೃಷ್ಣನ ವ್ರಜ ಭೂಮಿಯಲ್ಲಿರುವ ಗೋವರ್ಧನ ಪರ್ವತದಂತೆ ಕಾಮಗಿರಿ ಪರ್ವತವು ಬಹು ವೈಭವದಿಂದ ಪೂಜೆಗೊಳ್ಳುತ್ತದೆ. ಇದೇ ಪರ್ವತ ಭಾಗದಲ್ಲಿ ಭರತನು ಶ್ರೀರಾಮಚಂದ್ರನನ್ನು ಕಂಡನೆಂದೂ ಆತನ ಅಂತಃಕರಣದ ಮಾತುಗಳಿಗೆ ಪ್ರಜೆಗಳಷ್ಟೇ ಅಲ್ಲ ಇಲ್ಲಿಯ ಪರ್ವತವೂ ಕರಗಿಹೋಯಿತೆಂದೂ ಈ ಮಾತಿಗೆ ಸಾಕ್ಷೀಭೂತವಾಗಿ ಅಲ್ಲಲ್ಲಿ ಸೀತಾರಾಮರ ಪಾದಗಳ ಗುರುತಿರುವುದಾಗಿಯೂ ತೋರಿಸುತ್ತಾರೆ. ಇಂಥ ಘಟನೆಗಳಿಗೂ ಹಂಪಿಯ ಭಾಗವೂ ಹೊರತಾದುದೇನಲ್ಲ. ಸೀತಾಸೆರಗು, ರಾಮಧನುಸ್ಸು ಮೊದ

ಸವುಗಳ ಗುರುತುಗಳನ್ನು ಇಲ್ಲಿಯೂ ೯ರಿಸಬಹುದಾಗಿದೆ.

ಹೇಮಗಿರಿಯಲ್ಲಿ ರಾಮ ಲಕ್ಷ್ಮಣ ಸೀತಾ ತೆಯ ಮಂದಿರವಿದೆ. ಬಹುಸುಂದರ ಹಗಳು ಕಣ್ಣಿಗೆ ಹಬ್ಬವನ್ನುಂಟು ಡುವಂತಹವು ಅದೇರೀತಿ ಚಕ್ರ ರ್ಗದವಂಡೆಯಮೇಲೆ ಕೋದಂಡರಾಮನ ುದಿರವನ್ನೂ ಹಂಪಿಯಲ್ಲಿ ನಾವು ನೋಡ ಬುದು. ರಾಮಗಿರಿ ಪರ್ವತದ ದಕ್ಷಿಣ ಹಾಕುವಾಗ ಕೈಕೇಯಿ ಂದಿರ, ಭರತ ಮಂದಿರಗಳಿವೆ. ಅದರೆ ಲ್ಲಿ ಅಂಜನಾದೇವಿ ತಪಗೈದ ತಾಣ, ತಂಗ ಮುನಿಗಳ ತಪಸ್ಸು ಮಾಡಿದ ಣಗಳಿವೆ.

ಮಂದಾಕಿನಿಯು ಚಿತ್ರಕೂಟದ ತುದಿ ಗದಲ್ಲಿ ಹುಟ್ಟಿ ಚಂಚಲಗತಿಯಿಂದ ಮುಕಿ ಕೆಳಗಿಳಿಯುತ್ತದೆ. ಅಲ್ಲಲ್ಲಿ ಸ್ಫಟಿಕ ರಿ ಹಾಸಿದಂತೆ ತೋರುವುದುಂಟು. ಂಗಭದ್ರೆ ಹಾಗಲ್ಲ, ಬಹುದೂರದಿಂದ ರಿದು ಬಂದವಳು. ಹಲವು ಹರವುಗಳಾಗಿ ಮಣೇಯ ದೃಶ್ಯದಿಂದ ಕೂಡಿದವಳು. ನೇಕ ಸುಳಿಗಳಿಂದ ಕೂಡಿದ ಅವಳ ಪ್ರವಾಹವು ಚಕ್ರತೀರ್ಥವೆಂಬ ಹೆಸರಿನಿಂದ ಎರುತಿಸುವಂತಾಗಿರುವುದು.

ಅತ್ರಿಮಹರ್ಷಿಗಳ ಆಶ್ರಮದ ಮೇಲ್ ಭಾಗದಿಂದ ಮಂದಾಕಿನಿಯು ಹರಿದುಬರು ತ್ತಾಳೆ. ಅನುಸೂಯಾದೇವಿ ಇದೇ ಪರ್ವತ ದಲ್ಲಿ ಸೀತಾಮಾತೆಗೆ ಸತೀಧರ್ಮದ ಕುರುಳನ್ನು ತಿಳಿಸಿ ಹೇಳುತ್ತಾಳೆ. ಶ್ರೀ ರಾಮಚಂದ್ರನು ಈ ಪ್ರವಾಹದ ದಂಡೆಯು ಮೇಲಿರುವ ವಿಶಾಲ ಬಂಡೆಯ ಮೇಲೆ ಕುಳಿತುಕೊಂಡು ಅಲ್ಲಿ ದೊರೆಯುವ ಹೂ ಗಳಿಂದ ತನ್ನ ಪತ್ನಿಯ ಅಲಂಕರಣ ಮಾಡಿದನೆಂಬ ಕಥಾಭಾಗವಿದ್ದರೆ ಕಿಷ್ಕಿಂಧೆ ಯಲ್ಲಿ ತನ್ನ ಧರ್ಮಪತ್ನಿಗಾಗಿ ವಿವಿಧ ರೀತಿ ಯಲ್ಲಿ ಹಂಬಲಿಸುತ್ತಾನೆ, ಪರಿತಪಿಸುತ್ತಾನೆ.

ಚಿತ್ರಕೂಟದಲ್ಲಿ ಹನುಧಾರಾ ಎಂಬ ಸ್ಥಳವಿದೆ. ಇಲ್ಲಿ ಆಂಜನೇಯನ ವಿಗ್ರಹ ವಿದೆ. ಶ್ರೀರಾಮಚಂದ್ರನು ಸ್ವರ್ಗಾರೋಹಣ ಮಾಡಿದ ನಂತರ ಹನುಮ ಈ ಸ್ಥಳಕ್ಕೆ ಬಂದು ತಪಗೈದನೆಂದು ಹೇಳುತ್ತಾರೆ. ಹಂಪೆಯಲ್ಲಿರುವ ಪಂಪಾ ಸರೋವರದ ಇನ್ನೊಂದು ಭಾಗದಲ್ಲಿರುವ ಪರ್ವತದ ಮೇಲೆ ಹನುಮಂತನಿಗೆ ಮೊಟ್ಟಮೊದಲ ಬಾರಿ ಶ್ರೀರಾಮದರ್ಶನವಾಯಿತೆಂದು ಹೇಳು ತ್ತಾರೆ ಇಂದಿಗೂ ಆ ಪರ್ವತದಲ್ಲಿ ಆಂಜನೇಯನ ದೇವಮಂದಿರವಿದೆ ಉತ್ತರದ ಬೈರಾಗಿಗಳು ಅಲ್ಲಿ ಪೂಜೆ ಮಾಡುವ ಸಂಪ್ರದಾಯವಿದೆ. (ತುಲಸೀದಾಸರು ಇಲ್ಲಿಗೆ ಬಂದು ಹೋದರೆಂದು ಉತ್ತರದ ಬೈರಾಗಿಗಳು ಹೇಳುತ್ತಾರೆ.)

ಪ್ರಮೋದ ವನ ಎಂಬ ಹೆಸರಿನ ವನವು ಚಿತ್ರಕೂಟದಲ್ಲಿದೆ. ಮಂದಾಕಿನಿಯ ಪ್ರವಾಹದ ದಂಡೆಗುಂಟ ಅನೇಕ ಧರ್ಮ ಸತ್ರಗಳಿವೆ. ಹಿಂದು ಕಾಲದಲ್ಲಿ ಆಂಜನೇಯನ ಪರಮ ಭಕ್ತನಾಗಿದ್ದ ಮಹಾತ್ಮಾರಣಛೋಡ ದಾಸನಿಂದ ನಿರ್ಮಿತವಾಗಿದ್ದ ಆಶ್ರಮವನ್ನು ಈಗ ವಿಶ್ವಸ್ಥ ಸಂಸ್ಥೆಯೊಂದು ನಡೆಸಿ ಕೊಂಡು ಬರುತ್ತಿದೆ.

ಚಿತ್ರಕೂಟಪರ್ವತಕ್ಕೆ ಇಂದು ದೇಶ ವಿದೇಶಗಳಿಂದ ಯಾತ್ರಾರ್ಥಿಗಳು ಬಂದು ಹೋಗುತ್ತಿದ್ದಾರೆ. ಹಾಗೆ ಹಂಪೆಗೂ ಯಾತ್ರಿಕರ ಸಂಖ್ಯೆಯು ಬೆಳೆಯುತ್ತಲಿದೆ. ಚಿತ್ರಕೂಟಕ್ಕೆ ಹೋಗಬೇಕಾದರೆ ಕಂಚಿ ಎಂಬ ರೈಲು ನಿಲ್ದಾಣದಲ್ಲಿಳಿಯಬೇಕು. ಮುಂದೆ ಏಳು ಮೈಲು ಅಂತರದಲ್ಲಿ ಚಿತ್ರ ಕೂಟವಿದೆ. ಯಾತ್ರಾರ್ಥಿಗಳಿಗೆ ಹೋಗಿ ಬರಲು ಹಂಪೆಯಲ್ಲಿರುವಂತೆ ಸರಿಯಾದ ರೀತಿಯ ವ್ಯವಸ್ಥೆಗಳಾಗಿಲ್ಲ. ಹಿಂದು ಕಾಲ ದಲ್ಲಿ ಈ ಭಾಗದ ಮೇಲೆ ಹಿಂದೂ ಪದ ಪಾದಶಾಹಿತ್ವದ ಸೇವಕರೆಂದೆನಿಸಿಕೊಳ್ಳು ತ್ತಿದ್ದ ಪೇಶ್ವೆಯವರ ಆಳ್ವಿಕೆ ಇತ್ತು. ಆಗ ಅವರು ಅನೇಕ ಭವನಗಳನ್ನು ನಿರ್ಮಿಸಿರುವು ದುಂಟು.

ಚಿತ್ರಕೂಟವು ಇಂದು ಎರಡು ಪ್ರಾಂತ ಗಳಲ್ಲಿ ವಿಂಗಡಿಸಿಹೋಗಿದೆ. ಒಂದು ಭಾಗ ವನ್ನು ಅಂದರೆ ರಾಮಘಾಟದವರೆಗಿನ ಭಾಗ ವೆಲ್ಲ ಉತ್ತರಪ್ರದೇಶದ ಬಾಂದಾಜಿಲ್ಲೆಗೆ ಸೇರಿದುದಾಗಿದೆ. ಇನ್ನೊಂದು ಭಾಗವು ಮಧ್ಯಪ್ರದೇಶದ ಸತನಾಜಿಲ್ಲೆಗೆ ಸೇರಿದ ಭಾಗವೆಂದೆನಿಸಿಕೊಳ್ಳುತ್ತದೆ. ಹೀಗಾಗಿ ಭಾರತೀಯ ಸನಾತನ ಸಂಸ್ಕೃತಿಯ ಕುರುಹು ಎಂದೆನಿಸಿಕೊಳ್ಳುವ ಈ ಚಿತ್ರ ಕೂಟವು ಯಾವರೀತಿಯಲ್ಲಿ ಅಭಿವೃದ್ಧಿಯಾಗ ಬೇಕಾಗಿತ್ತೋ ಅದು ಆಗದೆ ಹೋಗಿದೆ. ಶ್ರೀ ರಾಮಭಕ್ತರು ಚಿತ್ರಕೂಟದಿಂದ ದಂಡ- ಕಾರಣ್ಯ ಹಾಗೂ ಹಂಪಿ ಭಾಗದವರೆಗೆ ಸರಾಗವಾಗಿ ಸಂಚರಿಸುವಂತೆ ವ್ಯವಸ್ಥೆ ಮಾಡಬೇಕಾದುದು ಅತ್ಯವಶ್ಯಕವಾದ ಕಾರ್ಯವೆನಿಸುತ್ತದೆ. ಶ್ರೀರಾಮಚಂದ್ರನ ಜೀವನದಲ್ಲಿ ಕನ್ನಡನಾಡಿನ ಈ ನೆಲವು ಯುಗ ಯುಗಾಂತರಗಳಿಂದ ಒಂದಾಗಿ ಹೋಗಿದೆ. ಚಿತ್ರಕೂಟದಂತೆ ಕಿಷ್ಕಿಂಧೆಯೂ ಸಹ ರಾಮ ಭಕ್ತರಿಗೆ ವಿಶೇಷ ಪೂಜನೀಯ ತಾಣವೆಂಬು ದರಲ್ಲಿ ಸಂದೇಹವಿಲ್ಲ



(7 ನೇ ಪುಟದಿಂದ)

ಅನ್ವಯವಾಗುವುದು. ರಾಮಾಯಣವು ಕಥೆಯ ದೃಷ್ಟಿಯಲ್ಲಿ ಸರ್ವೋತ್ತಮ ಕಲಾ ಕೃತಿ. ಸಂಸ್ಕೃತಿ ದೃಷ್ಟಿಯಲ್ಲಿ ಸರ್ವೋತ್ತ ಹಿಂದೂ ಆದರ್ಶ ಜೀವನ. ವಾಲ್ಮೀಕಿಯು ಉಪಯೋಗಿಸಿರುವ ಭಾಷೆಯು ಅತ್ಯಂತ ಸರಳ ಮತ್ತು ಸುಂದರ ಇಂತ ಸೊಗಸಾದ ಘನತರವಾದ ಮಹಾಗ್ರಂಥ ರಾಮಾಯಣ ವನ್ನು ರಚಿಸಿದ ಭಗವಾನ್ ವಾಲ್ಮೀಕಿ ಮಹರ್ಷಿಯು ಆದಿಕವಿ ಅಲ್ಲದೆ, ಕವಿಕುಲ ತಿಲಕನಾಗಿ ಪ್ರಕಾಶಿಸುತ್ತಿದ್ದಾನೆ. ಇವನ ವಿಷಯವನ್ನು ತಿಳಿಯುವುದು ಬೋಧ ಪ್ರದವೂ, ಉತ್ತಾರಕವೂ, ಪವಿತ್ರವೂ ಆಗಿದೆ.



# ರಾಮಸ್ತುತಿ

ಸಂಸಾರ ಸಂಗದಿಂದ ತಿಣಿಕಿದೆ ಭವದೊಳು |
ದಯೆ ತೋರೊ ರಘುರಾಜ ಸ್ವಾಮಿ ನನ್ನೊಳು |
ಪ್ರಾರಬ್ಧ ನನ್ನದು ಸರಿಯದು ಭವದೊಳು |
ನಿನ್ನ ಹೊರತು ರಾಮ ನನಗ್ಯಾರಿಲ್ಲ ಜಗದೊಳು |

ಸ್ಥಿರಾಗದು ಮನ ಇದು ವಿಕಾರದಿಂದ |
ಭ್ರಮಿಸುತಲಿದೆ ಇದು ಸಂಗದಿಂದ |
ಆಗದು ಅಪೂರ್ವ ಕಾರ್ಯ ಇದು ಮನದಿಂದ |
ನಿನ್ನ ಹೊರತು ರಾಮ ನನಗ್ಯಾರಿಲ್ಲ ಭವದಿ |

ಮಾಯಾ ಪ್ರಪಂಚದಲಿ ನಾ ಮುಳುಗಿರಲು |
ಮಹಾ ವ್ಯಾಧಿಯಲಿರುವೆ ನಾ ಹಗಲ ಇರುಳು |
ದೇಹಾಭಿಮಾನದಲಿ ನಾ ಮುಳುಗಿ ಇರಲು |
ರಾಮ ನಿನ್ನ ಹೊರತು ಯಾರಿಲ್ಲ ಜಗದೊಳು |

ದಾರಿದ್ರ್ಯ ದುಃಖದಿಂದ ಬಳಲಿದೆ ನಾನು |
ಸಂಚಿತ ಕರುಮ ನನ್ನಯ ಅರಿಯೆ ನಾನು |
ಸಂಸಾರ ಮಾಯೆಯಲಿ ಸಿಲುಕಿದೆ ನಾನು |
ನಿನ್ನ ಹೊರತು ರಾಮ ಇರಲಾರೆ ಇಲ್ಲಿ ನಾನು |

ಲಕುಮಿ ಬರಲು ಸೌಖ್ಯ ಅಪಾರ |
ರಾಮನ ಧ್ಯಾನಿಸಲು ಮನದ ಕಷ್ಟಪಾರ |
ಪ್ರಪಂಚದ ವಾರ್ತೆ ಹೇಳಲು ಅಪಾರ |
ನಿನ್ನ ಹೊರತು ನಾನು ಇರಲಾರೆ ರಾಮ |

ಅಹೋರಾತ್ರಿ ಕೆಲಸ ಮಾಡಲು ಸಾಲದು |
ಪ್ರಾರಬ್ಧ ಯೋಗದಿ ಎನ್ನ ಇರಗುಡದು |
ಭವ ದುಃಖ ನನ್ನದು ಎಂದು ಸರಿಯದು |
ನಿನ್ನ ಹೊರತು ರಾಮ ಇರಲಾರೆ ನಾನಿಂದು |

ತೀರ್ಥಯಾತ್ರೆ ಮಾಡಲು ಬಹುದುಃಖ |
ವಿಷಯದಲಿ ಇರಲು ನನಗೆ ಬಹು ಸುಖ |
ನನ್ನಯ ಸ್ವಹಿತವನು ನಾನು ಅರಿಯೆ |
ನಿನ್ನ ಹೊರತು ರಾಮ ನಾನು ಇರಲಾರೆ |

ನಾನು ಯಾರು ಎಲ್ಲಿಂದ ಬಂದೆ ಏನಿದು |
ಮಡದಿ ಮಕ್ಕಳು ಸ್ವಪ್ನದಂತೆ ಮಾಯೆ ಆದು |
ಅರಿಯದ ಈ ಮನ ಏನೇನು ತಿಳಿಯದು |
ರಾಮ ನಿನ್ನ ಹೊರತು ಇರಲಾರೆ ನಾನಿಂದು |

ಮೂಕ ನಾ ಆದೆ ಸುಳ್ಳು ಮಾತಿನದಿಂದ |
ಮುಳುಗಿರಲು ದುಃಖದಲಿ ಬಹು ದೋಷದಿಂದ |
ನಿನ್ನಯ ನೆನಪಾಗದು ಅಪೂರ್ವ ಕಾರ್ಯದಿ |
ನಿನ್ನ ಹೊರತು ಯಾರಿಲ್ಲ ರಾಮ ಜಗದಿ |

ಬ್ರಹ್ಮ ಮಾರುತಿ ನನ್ನ ರಾಮ ಬಂಧು |
ಚೈತನ್ಯ ನೀಡೆಯ ನಿಜದಿ ನೀ ದೀನಬಂಧು |
ಅಭ್ಯಂತರದಿ ಮನದಲಿ ಪ್ರೇಮ ಬಾರದು |
ರಾಮ ನಿನ್ನ ಹೊರತಿರಲಾರೆ ನಾನಿಂದು |

ವಿಶ್ರಾಂತಿ ಇಲ್ಲ ದೇಹಕ್ಕೆ ಅಣುಮಾತ್ರದಿ |
ಪ್ರವಾಹದಲಿ ಬಿದ್ದಿರುವೆ ನಾ ಕುಲಾಭಿಮಾನದಿ |
ಇದರಿಂದ ನೀಗುವುದು ಎಂದು ನಾನರಿಯೆನು |
ನಿನ್ನ ಹೊರತು ರಾಮ ಇರಲಾರೆ ನಾನಿಂದು |

ವಿಷಯ ಜನರಿಂದ ಸುತ್ತಿರಲು ನಾನು |
ಪ್ರಪಂಚ ಪಾಶದಲಿ ಸಿಲುಕಿರಲು ನಾನು |
ಎಂದೂ ಕಾಣಲಿಲ್ಲ ನನ್ನಯ ಹಿತವನು |
ರಾಮ ನಿನ್ನ ಹೊರತು ಇರಲಾರೆ ನಾನು |

ನರದೇಹದ ದೋಷ ವರ್ಣಿಸಲೆಷ್ಟು |
ಉಚ್ಚಾರ ಎನ್ನ ಮನದಿ ಮಾಡಲೆನಿಸಿದರು |
ಹಣೆಯ ಬರಹ ಎಂದೆಂದು ಅಳಿಯದು |
ರಾಮ ನಿನ್ನ ಹೊರತಿರಲಾರೆ ನಾನಿಂದು |

ನಾ ಅನಾಥಾ ಪ್ರಭು ನೀನೇ ದಾತಾ |
ನಾ ಮೂಢ ನೀನೇ ಜ್ಞಾನವಂತಾ |
ನಾ ದಾಸನೆನ್ನ ಮನದಿ ನಿನ್ನಯ ನಾಮ |
ನಿನ್ನ ಹೊರತು ಇರಲಾರನು ಹನುಮ |

(ರಾಮದಾಸರ ಕೃತಿಯ ಭಾವಾನುವಾದ)

**ಶ್ರೀ ಹಣಮಂತರಾವ ಕುಲಕರ್ಣಿ**

27 ನೇ ಪುಟದಿಂದ)

ಉದರ ದೈವಕ್ಕೆ ಎದುರಿಲ್ಲ, ಮೊದಲು ಅದರ ಪೂಜೆ, ಆದರೆ ಅದನ್ನು ಹೆಚ್ಚು ಆದರಿಸಬಾರದು ಕಪ್ಪವು, ಮಾತ್ರ ಕೊಡಬೇಕು, ಹಟದ ಮಗುವ ಸ್ವಾಳುವಂತೆ ಸ್ವಲ್ಪಕೊಟ್ಟು, ಸ್ವಲ್ಪ ಮರೆಸಿ, ಮನವನ್ನಾಳಬೇಕು. ಹೊಟ್ಟೆಯ ರಗಳೆಸಾಲದ್ದಕ್ಕೆ ವಿಧಿ ಹೊಟ್ಟೆಕಿಚ್ಚಿನ ಕಿಡಿಯನ್ನೂ ನೆಟ್ಟಿದ್ದಾನೆ. ಕಸದೊಳಗೆ ಕಸವಾಗಿ ಹೋಗುವ ಮಾನವ ಕೆಸರು ಹೆಸರಿಂದು ಬಸವಳಿವುದೇಕೆ? ಸೂರ್ಯ ಚಂದ್ರರು, ಅರಳುವ ಹೂಗಳು ತಮ್ಮಾಟ ಬಾಂಸಿ ಕೊಳ್ಳುತ್ತವೆಯೇ? ತುಟಿ ಹೊಲಿದು ಮೌನವಾಗಿ ಕರ್ತವ್ಯವೆಸಗಿದರೆ ಸಾಕು. ಕಾಲದಿಂದ ಕಾಲಕ್ಕೆ ಧರ್ಮ ಬದಲಾಗಬಹುದು – ಹಳೆಧರ್ಮ ಸತ್ತಿಹುದು ಹೊಸಧರ್ಮ ಹುಟ್ಟಿಲ್ಲ, ಈ ತಳಮಳಕೆ ಕೊನೆಯಿಲ್ಲ. ಸರಿಯಾಗಿ ಬಾಳುವುದೆ ಧರ್ಮ. ಹಳತು ಹೊಸತರ ಸಮನ್ವಯದ ಬಾಳು ಸಾರ್ಥಕ.

ಹೊಸಚಿಗುರು ಹಳೆ ಬೇರು ಕೂಡಿರಲು ಮರ ಸೊಬಗು
ಹೊಸಯುಕ್ತಿ ಹಳೆ ತತ್ತ್ವದೊಡೆ ಗೂಡೆ ಧರ್ಮ
ಋಷಿವಾಕ್ಯ ದೊಡನೆ ವಿಜ್ಞಾನ ಕಲೆ ಮೇಳವಿಸೆ
ಜಸವು ಜನ ಜೀವನಕೆ–ಮಂಕುತಿಮ್ಮ

ಹಳೆತತ್ತ್ವವನ್ನು ಹೊಸವಿಚಾರದೊಂದಿಗೆ ಮೇಳವಿಸುವುದು ಅದರ ಸಮನ್ವಯದೃಷ್ಟಿ. ಹೊಸತನವೆ ಬಾಳು. ಹಳಸಿಕೆಯೆಲ್ಲ ಸಾವು ಜಿಡು ಎಂದು ಹೊಸತಿಗೆ ಹೊಂದಿಕೊಂಡು ಬಾಳನ್ನು ಹಸನು ಮಾಡಬೇಕೆನ್ನುತ್ತಾರೆ ಜೀವನ ಎಂದ ಮೇಲೆ ನಗುಅಳು ನೋವು–ನಲಿವು ಸಹಜ. ಇವೆರಡನ್ನೂ ಸಮಾನವಾಗಿ ಸ್ವೀಕರಿಸ ಬೇಕು. ಇವೆರಡೂ ಆತ್ಮವನ್ನು ಮಥಿಸಿಸ ಸತ್ತ್ವಗೂಡಿಸುತ್ತವೆ.

ನಗುವೊಂದು ರಸಪಾಕ, ಅಳುವೊಂದು ರಸಪಾಕ
ನಗುವಾತ್ಮ ಪರಿಮಳವ ಪಸರಿಸುವ ಕುಸುಮ
ದುಗುಡವಾತ್ಮವಕಡೆದು ಸತ್ತ್ವವೆತ್ತುವಮಂತು
ಬಗೆದೆರಡನುಂ ಭಜಿಸು–ಮಂಕುತಿಮ್ಮ

ಆದರೆ ತಮ್ಮಿಂದ ಇತರರಿಗೆ ಯಾವಾಗಲೂ ನಗು ಬರುವಂತೆ ವರ್ತಿಸಬೇಕಲ್ಲದೆ ಅಳು ಬರುವಂತಲ್ಲ– ಎಲ್ಲರೂ ಸಂತಸಪಡುವಂತಿರ ಬೇಕು

ನಗುವು ಸಹಜ ಧರ್ಮ ನಗಿಸುವುದು ಪರಧರ್ಮ
ನಗುವ ಕೇಳುತ ನಗುವುದತಿಶಯದ ಧರ್ಮ
ನಗುವ ನಗಿಸುವ ನಗಿಸಿ ನಗುತ ಬಾಳುವ ವರವ
ಮಿಗೆ ನೀನು ಬೇಡಿ ಕೊಳೊ–ಮಂಕುತಿಮ್ಮ

ಸಂತಸದಿಂದ ಬಾಳ ಬೇಕಾದಲ್ಲಿ ಅದರ ನಾಲ್ಕು ವರಗಳನ್ನವರು ಹೇಳುತ್ತಾರೆ.

ಪರಿಮಿತಿಯ–ನಿರತಾಶೆ ಪರವಶತೆಯುಳಿದ ಸುಖ
ವಿರತಿಯೊಡವೆರೆದ ಲೋಕೋದ್ಯೋಗ ಯುಕ್ತಿ
ಪರಿಕಿಸುತ ಜೀವಿತವ ಸತ್ಯವನೆ ಪಿಡಿವ ಮತಿ
ವರಗಳೀ ನಾಲ್ಕೆವರ–ಮಂಕುತಿಮ್ಮ

ಆಸೆ, ವಿಷಯಸುಖ, ಲೌಕಿಕ ವಿಚಾರಗಳೆಲ್ಲಾ ಬಾಳಿನಲ್ಲಿ ಬೇಕೇ ಬೇಕು ಅವು ಮಿತಿಯಲ್ಲಿರಬೇಕೆಂದು ಡಿ ವಿ. ಜಿ. ಯವರ ನಿಲುವು. ಅವರು ಒಣ ವಿರಾಗಿಯಲ್ಲ. ಲೌಕಿಕ ಜೀವಿತದ ಸಮರ್ಥಕರು, ಲೌಕಿಕ ಪಾರಮಾರ್ಥಿಕ, ಸುಖ ದುಃಖ ದೈವಭಕ್ತಿ–ಪೌರುಷ ಇವುಗಳ ಸಮನ್ವಯ ಸಾಧಕರು.

ಬಹುಶಃ ತನ್ನನ್ನೇ ಮಾದರಿಯಾಗಿಟ್ಟು ಕೊಂಡು ತನ್ನ ಲೋಕಾನುಭವವನ್ನು ಒಳಗೊಂಡು ಗಂಭೀರವಾದ ಜೀವನ ತತ್ತ್ವವನ್ನು ವಿವೇಚಿಸ ಹೊರಟ ಭಾವುಕ ಪಂಡಿತ ಕವಿ ಡಿ. ವಿ. ಜಿ. ಯವರು ಅದಕ್ಕೆ ತಕ್ಕ ಪ್ರೌಢಭಾಷೆಯನ್ನು ಬಳಸಿದ್ದಾರೆ. ಕೆಲವೊಮ್ಮೆ ಪುನರುಕ್ತಿಗಳು ವಿಚಾರಗಳ ತಾಕಲಾಟಗಳು ಎಡೆಗೊಂಡರೂ ಅವರ ಖಚಿತ ನಿಲುವು ಸ್ಪಷ್ಟ. ನಮ್ಮ ಪ್ರಾಚೀನ ತತ್ತ್ವ ಜ್ಞಾನಿಗಳ. ಸಂತರ ಅಭಿಪ್ರಾಯಗಳನ್ನೇ ಅವಲಂಬಿಸಿದ್ದರೂ ಅವರ ಬದುಕಿನ ಸಂಧಿಕಾಲದಲ್ಲಿ ಜೀವನದ ಸಾರ್ಥಕತೆಯನ್ನು ಪ್ರತಿಪಾದಿಸಿ ಜೀವನೋತ್ಸಾಹ ತುಂಬುವ ಪ್ರಯತ್ನ ಮಾಡಿದುದು, ಅವರ ಮಹಾಕಾರ್ಯ. ತಾನು ಹೇಳಿದ್ದು ಪರಿಪೂರ್ಣವೆಂದಲ್ಲ, ಈ ಹೊತ್ತಿಗೆ ಸರಿ, ಕುಂದು ತೋರಿದರೆ. ತಿದ್ದಿಕೊಳ್ಳಬಹುದೆಂದು ವಿನಯವನ್ನು ಮೆರೆದಿದ್ದಾರೆ. ಡಿ ವಿ. ಜಿ. ಯವರ ಬಾಳೇ ಅವರ ತತ್ತ್ವದ ಪ್ರಾಯೋಗಿಕ ಹೊತ್ತಗೆ.

ತಾಮಂಕು ಎನ್ನುತಿಹ ತಿಮ್ಮ ನಿಜಮಂಕಲ್ಲ.
ಈ ಮಂಕು ಕೇಳುಗನ ಮತಿವಂತನೆನಿಸೆ
ತನ್ನೊಂದು ಅನುಭವದ ರಸಪಾಕ ಗುಳಿಗೆಗಳ
ನಿನ್ನೆಂದು ಸವಿದರಿಗೆ ತನುಮನಕೆ ಸುಖವು

★

# ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ. ತಿ. ದೇವಸ್ಥಾನಗಳು ಶಿಲಾ ವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿವೆ.

ವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು. ಇದಕ್ಕಾಗಿ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು. ಜೊತೆಗೆ ದೇವಾಲಯದ ನಕ್ಷೆ, ಮಂಡಲ ಅಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್‌ಗಿಂತ ಕಡಮೆಯದಲ್ಲದ ಸ್ಥಳೀಯ ದೇವಾಲಯ ಆಡಳಿತಾಧಿಕಾರಿಗಳಿಂದ ಪ್ರಮಾಣಪತ್ರಗಳನ್ನು ಕಳುಹಿಸಬೇಕು.

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ವಿಗ್ರಹಗಳನ್ನೂ 50% ರಿಯಾಯಿತಿ ದರದಲ್ಲಿ ಒದಗಿಸಲಾಗುವುದು. ಇದಕ್ಕಾಗಿಯೂ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು. ಜೊತೆಗೆ ದೇವಾಲಯದ ನಕ್ಷೆ, ಮಂಡಲಾಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು.

ಕಾಲದಿಂದ ಕಾಲಕ್ಕೆ ತಿ. ತಿ. ದೇ. ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು.

ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ – ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ, ತಿರುಪತಿ–517501.

# ವಾರ್ತಾಲಹರಿ

## ಡಾಕ್ಟರೇಟ್ ಪ್ರಶಸ್ತಿ

ತಿರುಪತಿಯ ಶ್ರೀವೆಂಕಟೇಶ್ವರ ವಿಶ್ವವಿದ್ಯಾನಿಲಯದ ತೆಲುಗು ವಿಭಾಗದಲ್ಲಿ ಶ್ರೀ ಸಿ. ಎಚ್. ಹರಿಶ್ಚಂದ್ರ ಅವರಿಗೆ 'ಮುದಿವರ್ತಿ ಕೊಂಡಮಾಚಾರ್ಯರ ಕೃತಿಗಳು – ಒಂದು ಪರಿಶೀಲನೆ' ಪ್ರೌಢ ಪ್ರಬಂಧಕ್ಕಾಗಿ ಡಾಕ್ಟರೇಟ್ ಪ್ರಶಸ್ತಿಯನ್ನು ನೀಡಲಾಗಿದೆ. ಅಮೃತ ಸಾರವು, ಬ್ರಹ್ಮಗಾಂಧರ್ವವು, ನಾರಾಯಣಮ್ಮ, ಕೂನಲಮ್ಮ–ಮೊದಲಾದ ನಲವತ್ತಕ್ಕೂ ಮೀರಿದ ಕೃತಿಗಳನ್ನು ತೆಲುಗು ಸಾಹಿತ್ಯ ಲೋಕಕ್ಕಿತ್ತು ಶ್ರೀಮಂತಗೊಳಿಸಿರುವ ಶ್ರೀಮುದಿವರ್ತಿ ಕೊಂಡಮಾಚಾರ್ಯರು ಉಪಾಧ್ಯಾಯರಾಗಿ ಕೆಲಸಮಾಡಿ ನಿವೃತ್ತರಾದ ಮೇಲೆ, ಈಗ ತಿ. ತಿ. ದೇ. ಪ್ರಕಟನ ಶಾಖೆಯಲ್ಲಿ ಪರಿಷ್ಕರ್ತರಾಗಿ ಕೆಲಸ ನಿರ್ವಹಿಸುತ್ತಿದ್ದಾರೆ.

## ಶ್ರೀವೆಂಕಟೇಶ್ವರ ಸ್ವಾಮಿ ಪ್ರಸಾದ ಲಾಡು ಬೆಲೆ ಹೆಚ್ಚಳ

ತಿರುಮಲೆಯಲ್ಲಿ ಶ್ರೀವೆಂಕಟೇಶ್ವರಸ್ವಾಮಿ ಪ್ರಸಾದವಾದ ಲಾಡುವಿನ ಬೆಲೆಯನ್ನು ಪ್ರತಿ ಲಾಡುವಿಗೆ ಒಂದು ರೂಪಾಯಿನಂತೆ ಹೆಚ್ಚಿಸಲಾಗಿದೆ. ಈ ಹಿಂದೆ ಪ್ರತಿಲಾಡುವಿನ ಬೆಲೆ 3 ರೂಗಳಿದ್ದು ಈಗ 4 ರೂಗಳಾಗಿವೆ. ಲಾಡು ತಯಾರಿಕೆಗೆ ಬೇಕಾದ ಸಿದ್ಧ ವಸ್ತುಗಳೆಲ್ಲದರ ಬೆಲೆಗಳೂ ಹೆಚ್ಚುತ್ತಿರುವುದರಿಂದ ಈ ರೀತಿಯಲ್ಲಿ ಲಾಡುವಿನ ಬೆಲೆಯನ್ನು ಹೆಚ್ಚಿಸಬೇಕಾಗಿ ಬಂದಿದೆ ಎಂದೂ, ಲಾಡುವಿನ ದರವನ್ನು ಹೆಚ್ಚಿಸುವಲ್ಲಿ ಯಾತ್ರಿಕರಿಂದಲೂ ಪ್ರಜೆಗಳಿಂದಲೂ ವಿಮರ್ಶೆ ವ್ಯತಿರೇಕಗಳು ಕಂಡು ಬರಲಿಲ್ಲವೆಂದೂ. ತಿ ತಿ. ದೇ. ಕಾರ್ಯ ನಿರ್ವಹಣಾಧಿಕಾರಿ ಶ್ರೀ ಸಿ. ಎಚ್ ವೆಂಕಟಪತಿರಾಜು ಅವರು ತಿಳಿಸಿದ್ದಾರೆ.

## ಪ್ರಮಾಣ ಸ್ವೀಕಾರ

ಆಂಧ್ರಪ್ರದೇಶದ ದೇವಾದಾಯ ಇಲಾಖೆಯ ಹೊಸ ಕಮೀಷನರ್ ಡಾ॥ ಜೆ. ಬಾಪುರೆಡ್ಡಿಯವರು ತಿ. ತಿ. ದೇ. ಧರ್ಮಕರ್ತರ ಮಂಡಳಿಯ ಪದನಿಮಿತ್ತ ಸದಸ್ಯರಾಗಿ ಪ್ರಮಾಣವಚನ ಸ್ವೀಕರಿಸಿದ್ದಾರೆ.

ಮೊದಲು ಶ್ರೀಯುತರು 25 ರೂಗಳ ಸರತಿಯ ಸಾಲಿನಲ್ಲಿ ಶ್ರೀವೆಂಕಟೇಶ್ವರಸ್ವಾಮಿ ಆಲಯವನ್ನು ಪ್ರವೇಶಿಸಿದರು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ ಎಚ್. ವೆಂಕಟಪತಿರಾಜು ಅವರು ಶ್ರೀಯುತರಿಗೆ ದೇವಾಲಯದ ಬಂಗಾರದ ಬಾಗಿಲ ಬಳಿ ಧರ್ಮಕರ್ತರ ಮಂಡಳಿಯ ಸದಸ್ಯತ್ವದ ಪ್ರಮಾಣ ವಚನವನ್ನು ನೀಡಿದರು. ನಂತರ ಶ್ರೀಯುತರು ಸ್ವಾಮಿಯನ್ನು ಸಂದರ್ಶಿಸಿದರು. ಸದಸ್ಯರಾದ ಮೇಲೆ ಡಾ॥ ಜೆ. ಬಾಪುರೆಡ್ಡಿಯವರಿಗೆ ರಂಗನಾಯಕ ಮಂಟಪದಲ್ಲಿ ವೇದೋಕ್ತ ಆಶೀರ್ವಚನ ಮಾಡಲಾಯಿತು ಈ ಕಾರ್ಯಕ್ರಮದಲ್ಲಿ ತಿ. ತಿ. ದೇ. ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್ ರಮೇಶಕುಮಾರ್, ಉಪಕಾರ್ಯನಿರ್ವಹಣಾಧಿಕಾರಿಗಳಾದ ಶ್ರೀ ಮುನಿಕೃಷ್ಣನ್, ವಾಸುದೇವ ನಾಯುಡು ಮೊದಲಾದವರು ಹಾಜರಿದ್ದರು.

## ತಿರುಪತಿಯಲ್ಲಿ ನೇತ್ರ ಚಿಕಿತ್ಸಾ ಶಿಬಿರ

ತಿರುಪತಿಯಲ್ಲಿ ತಿ. ತಿ. ದೇ. ಗಳ ವತಿಯಿಂದ ಪ್ರತಿವರ್ಷವೂ ನಡೆಯುವ ಸಾಮಾಜಿಕ ಆರೋಗ್ಯ ಸಂರಕ್ಷಣಾಕಾರ್ಯಕ್ರಮದಲ್ಲಿ ಒಂದಾದ ಉಚಿತ ನೇತ್ರ ಚಿಕಿತ್ಸಾ ಶಿಬಿರ ಈ ಬಾರಿಯೂ ಫೆಬ್ರವರಿ ತಿಂಗಳ ಕೊನೆಯ ಭಾಗದಲ್ಲಿ ನಡೆದು ಯಶಸ್ವಿಯಾಯಿತು.

ಹೈದರಾಬಾದಿನ ಸರೋಜಿನೀ ದೇವಿ ನೇತ್ರ ಚಿಕಿತ್ಸಾ ಆಸ್ಪತ್ರೆಯವರ ಸಹಕಾರದಿಂದ ನಡೆದ ಈ ಶಿಬಿರದಲ್ಲಿ ಸದರೀ ಆಸ್ಪತ್ರೆಯ ನೇತ್ರ ಚಿಕಿತ್ಸಾ ತಜ್ಞ ಶ್ರೀ ರಂಗಾ ರೆಡ್ಡಿಯವರು ನೇತ್ರ ಪರೀಕ್ಷೆ ಹಾಗೂ ಶಸ್ತ್ರ ಚಿಕಿತ್ಸೆಗಳ ನೇತೃತ್ವವನ್ನು ವಹಿಸಿದ್ದರು.

ಫೆಬ್ರವರಿ 20 ರಂದು ತಿ. ತಿ. ದೇ. ಗಳ ಮೂರನೇ ಸತ್ರದಲ್ಲಿ ಆರಂಭವಾದ ಶಿಬಿರದಲ್ಲಿ ಮೊದಲದಿನ ಉಚಿತ ನೇತ್ರ ಪರೀಕ್ಷೆಯೂ ಮಾರನೇ ದಿನ ಶಸ್ತ್ರ ಚಿಕಿತ್ಸೆಗಳೂ ನಡೆದವು.

ತಿ ತಿ. ದೇ. ಗಳ ವೈದ್ಯಕೀಯ ವಿಭಾಗದವರಿಂದ ಸಹಯೋಜಿತವಾದ ಈ ಶಿಬಿರದಲ್ಲಿ ನೇತ್ರ ಚಿಕಿತ್ಸೆಗೆ ಅರ್ಹರಾದವರಿಗೂ ಅವರೊಂದಿಗೆ ಬಂದಿದ್ದ ಒಬ್ಬೊಬ್ಬ ಸೇವಾಕರ್ತರಿಗೂ ಉಚಿತ ಭೋಜನ, ವಸತಿ ಸೌಲಭ್ಯವನ್ನೂ, ಶಸ್ತ್ರಚಿಕಿತ್ಸೆಗೆ ಒಳಪಟ್ಟವರಿಗೆ ಉಚಿತ ಸುಲೋಚನಗಳನ್ನೂ ನೀಡಲಾಯಿತು.

## ಶ್ರೀನಿವಾಸ ಮಂಗಾಪುರದಲ್ಲಿ ವೈಭವದ ಬ್ರಹ್ಮೋತ್ಸವಗಳು

ತಿರುಪತಿಯ ಸಮೀಪದ ಶ್ರೀನಿವಾಸ ಮಂಗಾಪುರದಲ್ಲಿನ ಶ್ರೀ ಕಲ್ಯಾಣ ವೆಂಕಟೇಶ್ವರ ಸ್ವಾಮಿ ಬ್ರಹ್ಮೋತ್ಸವಗಳು ದಿನಾಂಕ 7–2–88 ರಿಂದ 16–2–88 ರ ವರೆಗೆ ವೈಭವದಿಂದ ನಡೆದು ಯಶಸ್ವಿಯಾದವು. ಸಹಸ್ರಾರು ಮಂದಿ ಭಕ್ತರು ಸ್ವಾಮಿ ಬ್ರಹ್ಮೋತ್ಸವದ ವಾಹನೋತ್ಸವಗಳಲ್ಲೂ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲೂ ಭಾಗವಹಿಸಿ ಆನಂದ ಹೊಂದಿದರು. 12–2–88 ರಂದು ಗರುಡವಾಹನ 15–2–88 ರಂದು ರಥೋತ್ಸವಗಳು ಎಂದಿಗಿಂತ ಹೆಚ್ಚು ಜನವನ್ನು ಆಕರ್ಷಿಸಿದವು. ಆಯಾ ದಿನಗಳಲ್ಲಿ ತಿರುಪತಿಯಿಂದ ಹಾಗೂ ಚಂದ್ರಗಿರಿಯಿಂದ ವಿಶೇಷ ಬಸ್‌ಗಳೂ ಶ್ರೀನಿವಾಸ ಮಂಗಾಪುರಕ್ಕೆ ಹೋಗಿ ಬರುವಂತೆ ಅನುಕೂಲ ಕಲ್ಪಿಸಲಾಗಿದ್ದಿತು.

## ಮಾರ್ಚ್ ತಿಂಗಳಲ್ಲಿ ಶ್ರೀಅನ್ನಮಾಚಾರ್ಯ ವರ್ಧಂತಿ

ಶ್ರೀವೆಂಕಟೇಶ್ವರ ಸ್ವಾಮಿಯ ಹಿರಿಯ ಭಕ್ತ ತೆಲುಗಿನ ವಾಗ್ಗೇಯಕಾರ ಶ್ರೀ ಅನ್ನಮಾಚಾರ್ಯರ 485 ನೇ ವರ್ಧಂತಿ ಉತ್ಸವಗಳು ತಿರುಪತಿಯಲ್ಲಿ ಶ್ರೀ ಅನ್ನಮಾಚಾರ್ಯ ಪ್ರಾಜೆಕ್ಟ್‌ವತಿಯಿಂದ ನಡೆಸಲು ಆಯೋಜಿಸಲಾಗಿದೆ. 15–3–88 ರಿಂದ ಒಂದುವಾರಕಾಲ ನಡೆಯುವ ಈ ಉತ್ಸವಗಳಲ್ಲಿ ದಿನವೂ ಬೆಳಗ್ಗೆ ಸಂಜೆಗಳಲ್ಲಿ ಸಂಗೀತ ಸಭೆಗಳೂ, ಉಪನ್ಯಾಸ ಹರಿಕಥೆಗಳೂ ನಡೆದು ಖ್ಯಾತ ವಿದ್ವಾಂಸರುಗಳು ಉಪನ್ಯಾಸಕರು ಭಾಗವಹಿಸುವರೆಂದು ವರದಿಗಳು ತಿಳಿಸಿವೆ.

## ಹರಿದಾಸಸಾಹಿತ್ಯಕ್ಕೆ ಮನ್ನಣೆ

ಜಗದ್ಗುರು ಶ್ರೀಮಧ್ವಾಚಾರ್ಯರ ಮೂಲ ಸಂಸ್ಥಾನಗಳಲ್ಲಿ ಒಂದಾದ ಶ್ರೀರಾಘವೇಂದ್ರ ಮಠದ ವತಿಯಿಂದ ಪ್ರತಿವರ್ಷದಂತೆ, ಫೆಬ್ರವರಿ 23, 24, 25 ನೇ ದಿನಾಂಕಗಳಲ್ಲಿ ನಂಜನಗೂಡಿನಲ್ಲಿ ಶ್ರೀಸಮೀರ ಸಮಯ ಸಂವರ್ಧಿನೀ ಸಭೆಯು ಅತಿ ವೈಭವದಿಂದ ನಿರ್ವಹಿಸಲ್ಪಟ್ಟಿತು. ದ್ವೈತಾದ್ವೈತ ವಿಶಿಷ್ಟಾದ್ವೈತಗಳಲ್ಲಿ ನಿಷ್ಣಾತರಾದ ನೂರಾರು ಜನ ಪಂಡಿತರು ಆಗಮಿಸಿದ್ದರು.

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

## ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| | (ರೂ 6–00 ಶುಲ್ಕದಿಂದ 4 ಮಂದಿಗೆ ಅನುಮತಿ) | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–00 ರಿಂದ 6–30 |
| ಸರ್ವದರ್ಶನ | ,, 5–45 ರಿಂದ 7–00 | ,, 6–30 ರಿಂದ 11–30 |
| ತಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 9–00 ರಿಂದ 10–00 | |
| | ( ರೂ 100/- ಶುಲ್ಕದಿಂದ ಒಬ್ಬರಿಗೆ ಅನುಮತಿ ) | |
| | (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 2/-ಶುಲ್ಕ) | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 11–30 ರಿಂದ 12–00 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 12–30 ರಿಂದ 6–00 |
| ಊಂಜಲ್ ಸೇವೆ | ರಾತ್ರಿ 7–00 ರಿಂದ 8–00 | — |
| (ಮುಕುರ ಮಂಟಪದಲ್ಲಿ) | (ಶುಲ್ಕ ರೂ 150/-) | |
| ರಾತ್ರಿ ಗಂಟೆ | ರಾತ್ರಿ [illegible]–00 ರಿಂದ 8–30 | ರಾತ್ರಿ 6–00 ರಿಂದ 6–30 |
| ಸರ್ವದರ್ಶನ | — | ,, 6–30 ರಿಂದ 9–15 |
| ಏಕಾಂತಸೇವೆ | ,, 8–30 ರಿಂದ 9–00 | ,, 9–15 ರಿಂದ 9–30 |

**ಪೇಷ್ಕಾರ್.**

ರಾಘವೇಂದ್ರ ಮಠಾಧೀಶರಾದ ಶ್ರೀ ಸುಶಮೀಂದ್ರ ತೀರ್ಥರು, ಫಲಿಮಾರು ಮಠಾಧೀಶರಾದ ಶ್ರೀವಿದ್ಯಾಮಾನ್ಯತೀರ್ಥರು ಪೇಜಾವರ ಮಠಾಧೀಶರಾದ ಶ್ರೀವಿಶ್ವೇಶ ತೀರ್ಥರು ಹಾಗೂ ಪರವಸ್ತು ಪರಕಾಲ ಮಠಾಧೀಶರು ಭಾಗವಹಿಸಿ ಸಭೆಗೆ ಶೋಭೆಯನ್ನು ತಂದರು.

ಈ ವರ್ಷದ ಸಭೆಯ ವಿಶೇಷವೆಂದರೆ ಕೇವಲ ತರ್ಕ–ವ್ಯಾಕರಣ–ಮೀಮಾಂಸೆ – ವೇದಾಂತಾದಿ ವಿಷಯಗಳಿಗೆ ಮಾತ್ರ ಸೀಮಿತವಾಗಿದ್ದ ಈ ಸಭೆಯಲ್ಲಿ ದಾಸಸಾಹಿತ್ಯಕ್ಕೆ ವಿಶೇಷ ಮನ್ನಣೆ ದೊರೆತದ್ದು. ಈ ಹೊಸಪ್ರಕ್ರಿಯೆಗೆ ನಾಂದಿ ಹಾಡಿದವರು ಸಭಾಸಂಚಾಲಕರಾದ ಶ್ರೀಮಾನ್ ರಾಜಾ ಯಸ್, ಗಿರಿಯಾಚಾರ್ಯರು. 24 ನೇ ತಾರೀಕಿನಂದು "ದಾಸಸಾಹಿತ್ಯದಲ್ಲಿ ವೇದಾಂತ" ಎನ್ನುವ ವಿಷಯದ ಮೇಲೆ ಶ್ರೀ ಕೆ. ಅಪ್ಪಣ್ಣಾಚಾರ್ಯರ ಉಪನ್ಯಾಸ ನಡೆಯಿತು. ನಂತರ ರಾಜಾ ಶ್ರೀ ಯಸ್ ಗಿರಿಯಾಚಾರ್ಯರು ದಾಸಸಾಹಿತ್ಯದ ಅಪೂರ್ವತೆಯ ಬಗ್ಗೆ ಮಾತನಾಡುತ್ತಾ, ದಾಸಸಾಹಿತ್ಯಕ್ಕೆ ಮೋಕ್ಷಪ್ರದಾತೃತ್ವವನ್ನು ಸ್ಪಷ್ಟವಾಗಿ ಸಮರ್ಥಿಸಿದರು. ಮುಂದಿನ ವರ್ಷದಿಂದ ತಮ್ಮ ಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠದಲ್ಲಿ ದಾಸಸಾಹಿತ್ಯ ಬೋಧನಾ ಪ್ರಣಾಳಿಕೆಯನ್ನು ಏರ್ಪಡಿಸುವುದಾಗಿ ಸಭಿಕರ ಹರ್ಷೋದ್ಗಾರದ ಮಧ್ಯದಲ್ಲಿ ಉದ್ಘೋಷಿಸಿದರು. ಭವಿಷ್ಯತ್ತಿನಲ್ಲಿ ದಾಸಸಾಹಿತ್ಯದ ಪ್ರಚಾರಕ್ಕಾಗಿ ಪ್ರತಿವರ್ಷ ಪ್ರತ್ಯೇಕವಾಗಿ ಒಂದು ಸಭೆಯನ್ನು ಏರ್ಪಡಿಸುವುದಾಗಿಯೂ ತಿಳಿಸಿದರು. ವಿಜಯದಾಸಾದಿ ಸಕಲ ಹರಿದಾಸರಿಗೂ ಅವರ ಸಾಹಿತ್ಯಕ್ಕೂ ಸ್ಫೂರ್ತಿ ಮೂರ್ತಿಗಳಾಗಿದ್ದ ರಾಘವೇಂದ್ರ ಗುರುಸಾರ್ವಭೌಮರ ಮಹಾ ಸಂಸ್ಥಾನದ ಗಿರಿಯಾಚಾರ್ಯರು ಮಾಡಿದ ಈ ಘೋಷಣೆ ಸಮಂಜಸವೂ, ಸಾರ್ಥಕವೂ ಆಗಿದೆ ಎಂದು ಸಭೆ ಆನಂದಿಸಿತು.

ನಂತರದಲ್ಲಿ ಪೇಜಾವರ ಶ್ರೀಗಳವರು ತಮ್ಮ ಆಶೀರ್ವಚನ ಭಾಷಣದಲ್ಲಿ ಗಿರಿಯಾಚಾರ್ಯರು ಮಂಡಿಸಿದ "ದಾಸಸಾಹಿತ್ಯಕ್ಕೆ ಮೋಕ್ಷಪ್ರದಾತೃತ್ವ" ಎಂಬ ವಿಷಯವನ್ನು ಸಮರ್ಥಿಸುತ್ತಾ ಮುಂದಿನ ಅಖಿಲ ಭಾರತ ಮಹಾಮಾಧ್ವ ಮಂಡಲಿಯ ಸಭೆಗಳಲ್ಲಿ ದಾಸಸಾಹಿತ್ಯಕ್ಕೆ ಸಮುಚಿತವಾದ ಸ್ಥಾನಮಾನಗಳನ್ನು ಕಲ್ಪಿಸುವುದಾಗಿ ಭರವಸೆ ನೀಡಿದರು.

ಮುಂದಿನ ಸಂಚಿಕೆಯಲ್ಲಿ .... .... ..

**ಸಪ್ತಗಿರಿ. — ಏಪ್ರಿಲ್ 1988**

**ಆರೋಗ್ಯ-ಯೋಗಾಸನ**
— ಕೆ. ಕೇಶವ ಮೂರ್ತಿ

**ಪ್ರಸನ್ನ ಗಾಯತ್ರಿ**
—ಬಿ. ಎಸ್. ಮಣಿ

**ಅಹೋಬಿಲ-ಆಚಾರ್ಯರು**
— ಸಿ. ಗೋವಿಂದಾಚಾರ್ಯ

**ಪ್ರಾಚೀನ ನ್ಯಾಯಗಳು**
— ಬಿ. ನ. ಗುಂಡೂರಾವ್

**ವಿಜಯಾಂಕಾ**
— ಗಣಪತಿಭಟ್ಟ, ಆರ್ತಿಕಜೆ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

**ವಿಶೇಷ ಸೂಚನೆ:** ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ — ಸಂಪಾದಕರು
**ತಿ.ತಿ.ದೇ. ತಿರುಪತಿ.**

# ತಿಂಗಳಿನ ಮುಖ್ಯದಿನಗಳು

## ಏಪ್ರಿಲ್ 1988

| | | |
|---|---|---|
| 1. | ಶುಕ್ರವಾರ | ತಿರುಮಲೆಯಲ್ಲಿ ವಸಂತೋತ್ಸವದ ಪ್ರಯುಕ್ತ ಶ್ರೀ ವೆಂಕಟೇಶ್ವರ ಸ್ವಾಮಿ ರಜತ ರಥೋತ್ಸವ |
| 13. | ಬುಧವಾರ | ಸೌರಮಾನ ಯುಗಾದಿ<br>ಶ್ರೀಭಾಷ್ಯಕಾರ ಉತ್ಸವಾರಂಭ |
| 21. | ಗುರುವಾರ | ಶ್ರೀ ಶಂಕರಾಚಾರ್ಯ ಜಯಂತಿ<br>ಮಧುರಕವಿ ಆಳ್ವಾರ್ ಉತ್ಸವಾರಂಭ |
| 22. | ಶುಕ್ರವಾರ | ಶ್ರೀಭಾಷ್ಯಕಾರ ಶಾತ್ತುಮೊರೆ |
| 29. | ಶುಕ್ರವಾರ | ನಾಗಲಾಪುರಂ ಶ್ರೀವೇದನಾರಾಯಣಸ್ವಾಮಿ ಬ್ರಹ್ಮೋತ್ಸವದ ಅಂಕುರಾರ್ಪಣೆ |
| 30. | ಶನಿವಾರ | ಶ್ರೀನರಸಿಂಹಜಯಂತಿ |

# ಚಂದಾದಾರರಲ್ಲಿ ಒಂದು ಮನವಿ

ಕನ್ನಡ ಸಪ್ತಗಿರಿಯ ನೇರ ಚಂದಾದಾರರಲ್ಲಿ ಏಪ್ರಿಲ್ 1988 ಕ್ಕೆ ಚಂದಾ ಅವಧಿ ಮುಗಿಯುವ ಚಂದಾ ಕ್ರಮಸಂಖ್ಯೆಗಳನ್ನು ಕೆಳಗೆ ನೀಡಲಾಗಿದೆ. ಚಂದಾದಾದರು ದಯವಿಟ್ಟು ತಮ್ಮ ಮುಂದಿನ ಚಂದಾ ಹಣವನ್ನು ಕೂಡಲೇ ಎಂ.ಓ. ಮಾಡಬೇಕೆಂದು ವಿನಂತಿ.

28, 63, 95, 120, 228, 230, 339, 340, 342, 344, 345, 347, 348, 349, 444, 451, 452, 459, 798, 815, 819, 822, 826, 834, 835, 837, 839, 840, 844, 845, 856, 881, 1446, ರಿಂದ 1452, 1454, 1455, 1457, 1458, 1460 ರಿಂದ 1464, 1466, ರಿಂದ 1472, 1475, 1476, 1478, ರಿಂದ 1483.

ಚಂದಾ ಹಣವನ್ನು ಕಳುಹಿಸುವ ಚಂದಾದಾರರು ತಮ್ಮ ಚಂದಾ ಸಂಖ್ಯೆಯನ್ನು ತಪ್ಪದೆ ಸ್ಪಷ್ಟವಾಗಿ ಬರೆಯಬೇಕು. ವಿಳಾಸವನ್ನು ಬಿಡಿಯಾದ ದಪ್ಪ ಅಕ್ಷರಗಳಲ್ಲಿ ಬರೆಯಿರಿ ವಿಳಾಸ ಬದಲಾವಣೆಯನ್ನು ತಿಳಿಸುವಾಗ ಚಂದಾ ಕ್ರಮ ಸಂಖ್ಯೆಯನ್ನೂ, ಹೊಸವಿಳಾಸವನ್ನೂ ಸ್ಪಷ್ಟವಾಗಿ ಬರೆಯ ಬೇಕೆಂದು ವಿನಂತಿಸಲಾಗಿದೆ.

**ಸಂಪಾದಕರು, ಸಪ್ತಗಿರಿ**
**ತಿ. ತಿ. ದೇ. ತಿರುಪತಿ.**

**ಸಪ್ತಗಿರಿ**

**ಚಂದಾದಾರರಿಗೆ**
**ಏಜಂಟರಿಗೆ**
**ಜಾಹೀರಾತುದಾರರಿಗೆ**

**1988** ವಿಭವದ
ಉಗಾದಿ ಶುಭಾಶಯಗಳು

**— ಸಂಪಾದಕ**

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

